# ಬಸವಯೋಗಿ

# ಗುರುಮಹಾಂತ ಸ್ವಾಮಿಗಳು



ಪ್ರೊ. ಸಿದ್ಧಣ್ಣ ಲಂಗೋಟಿ (ಚಾಂದಕವಠೆ)

॥ ಓಂ ಶ್ರೀ ಗುರು ಬಸವಲಿಂಗಾಯ ನಮಃ ॥

ಪೂಜ್ಯ ಶ್ರೀ ಮ. ನಿ. ಪ್ರ. ಗುರು ಮಹಾಂತ ಸ್ವಾಮಿಗಳವರ
ದ್ವಾದಶ ಪೀಠಾರೋಹಣ (೨೦೦೪ - ೨೦೧೬) ಸವಿನೆನಪಿನ ಪ್ರಕಟಣೆ

# ಬಸವ ಕಾಯಕಯೋಗಿ
# ಗುರುಮಹಾಂತ ಸ್ವಾಮಿಗಳು

**ಪ್ರೊ. ಸಿದ್ಧಣ್ಣ ಲಂಗೋಟಿ (ಚಾಂದಕವಠೆ)**
ಎಂ. ಎ. (ತತ್ವಜ್ಞಾನ), ಎಲ್ಎಲ್.ಬಿ. (ಸ್ಪೇಶಲ್)
ಎಂ. ಎ. (ಹಿಂದಿ), ಎಂ. ಎ. (ಕನ್ನಡ), ಪಿ. ವಾಯ್. ಇಡಿ. (ಯೋಗ)
ಗೌ॥ ಸಂಪಾದಕರು, ಬಸವಬೆಳಗು ಪತ್ರಿಕೆ
ರಾಮದುರ್ಗ-೫೯೧ ೧೨೩. ಜಿ॥ ಬೆಳಗಾವಿ

೨೦೧೬

ಬಸವ ಕೇಂದ್ರ
ಚಿತ್ತರಗಿ ಶ್ರೀ ವಿಜಯಮಹಾಂತೇಶ್ವರ ಧರ್ಮ ಪ್ರಸಾರಕ ಮಂಡಲ
ಚಿತ್ತರಗಿ ಸಂಸ್ಥಾನಮಠ, ಇಳಕಲ್ಲ-೫೮೭೧೨೫. ಜಿ. ಬಾಗಲಕೋಟೆ

ಬಸವ ಕಾಯಕಯೋಗಿ ಗುರುಮಹಾಂತ ಸ್ವಾಮಿಗಳು

ಲೇಖಕರು : ಪ್ರೊ. ಸಿದ್ಧಣ್ಣ ಲಂಗೋಟಿ (ಚಾಂದಕವಠೆ)
ಎಂ. ಎ. (ತತ್ವಜ್ಞಾನ), ಎಲ್‌ಎಲ್.ಬಿ. (ಸ್ಪೇಶಲ್)
ಎಂ. ಎ. (ಹಿಂದಿ), ಎಂ. ಎ. (ಕನ್ನಡ), ಸಿ. ವಾಯ್. ಇಡಿ. (ಯೋಗ)
ಗೌ॥ ಸಂಪಾದಕರು, ಬಸವಬೆಳಗು ಪತ್ರಿಕೆ
ರಾಮದುರ್ಗ-೫೯೧ ೧೨೩. ಜಿ॥ ಬೆಳಗಾವಿ



ಪ್ರಕಾಶಕರು : ಬಸವ ಕೇಂದ್ರ
ಚಿತ್ತರಗಿ ಶ್ರೀ ವಿಜಯಮಹಾಂತೇಶ್ವರ ಧರ್ಮ ಪ್ರಸಾರಕ ಮಂಡಲ
ಚಿತ್ತರಗಿ ಸಂಸ್ಥಾನಮಠ, ಇಳಕಲ್ಲ-೫೮೭೧೨೫ ಜಿ. ಬಾಗಲಕೋಟೆ

ಪ್ರಥಮ ಮುದ್ರಣ : ೨೦೧೫
ಎರಡನೆಯ ಮುದ್ರಣ : ೨೦೧೬

ಪ್ರತಿಗಳು : ೧,೦೦೦

ಪುಟಗಳು : viii + ೮೨ = ೯೦

ಪೇಪರ ಬಳಸಿದ್ದು : ಮ್ಯಾಪ್ಲಿಥೋ ಮತ್ತು ಆರ್ಟ ಕವ್ಹರ ೨೫೦ ಜಿ.ಎಸ್.ಎಂ.

ಬೆಲೆ : ರೂ. ೧೦೦-೦೦ (ಒಂದು ನೂರು ರೂಪಾಯಿಗಳು)

ಮುಖಪುಟ ವಿನ್ಯಾಸ : ಶ್ರೀ ರವೀಂದ್ರ, ವಿಶ್ವಜ್ಞ, ಧಾರವಾಡ

ಮುದ್ರಕರು : ಶ್ರೀ ಹುಚ್ಚೇಶ್ವರ ಆಫ್‌ಸೆಟ್ ಪ್ರಿಂಟರ್ಸ
ರಾಮದುರ್ಗ-೫೯೧ ೧೨೩. ಜಿ॥ ಬೆಳಗಾವಿ
ದೂರವಾಣಿ : ೦೮೩೩೫-೨೪೧೦೬೩

॥ ಓಂ ಶ್ರೀ ಗುರು ಬಸವಲಿಂಗಾಯ ನಮಃ ॥

**ಶ್ರೀ ಮ.ನಿ.ಪ್ರ. ಡಾ. ಮಹಾಂತ ಶಿವಯೋಗಿಗಳು**

ಚಿತ್ತರಗಿ ಶ್ರೀ ವಿಜಯ ಮಹಾಂತೇಶ್ವರ ಸಂಸ್ಥಾನಮಠ, ಇಳಕಲ್ಲ-೫೮೭ ೧೨೫.
ಶ್ರೀ ಸಂಗನಬಸವಮಠ (ವಿರಕ್ತಮಠ) ಸವದಿ. ತಾ. ಅಥಣಿ ಜಿ. ಬೆಳಗಾವಿ

# ಶುಭ ಹರಕೆ

ನಮ್ಮ ನಾಡಿನ ಖ್ಯಾತ ಶರಣ ಸಾಹಿತಿಗಳೂ, ಬಸವ ಬೆಳಗು ಪತ್ರಿಕೆಯ ಸಂಪಾದಕರೂ, ಶರಣ ಸಿದ್ಧಾಂತ ವಿದ್ಯಾಪೀಠ ಹಾಗೂ ಮಹಾಂತ ಜೋಳಿಗೆಯ ಸಂಚಾಲಕರೂ ಆಗಿ ಕಳೆದ ನಾಲ್ವತ್ತು ವರುಷಗಳಿಂದ ಬಸವಾದಿ ಶರಣರ ತತ್ವ ಪ್ರಸಾರ ದಲ್ಲಿ ತೊಡಗಿಸಿಕೊಂಡಿರುವ ಶರಣ ಸಿದ್ಧಣ್ಣ ಲಂಗೋಟಿ ಅವರು ನಮ್ಮ ಚಿತ್ತರಗಿ ಸಂಸ್ಥಾನಮಠ ಇಳಕಲ್ಲದ ೨೦ನೇ ಅಧಿಪತಿಗಳಾಗಿರುವ ಶ್ರೀ ಮ.ನಿ.ಪ್ರ. ಗುರು ಮಹಾಂತ ಸ್ವಾಮಿಗಳವರ ಕುರಿತು ಈ ಗ್ರಂಥ ರಚಿಸಿದ್ದಾರೆ.

ಸಿದ್ಧಣ್ಣನವರು ಕಳೆದ ೩೬ ವರುಷಗಳಿಂದ ಶ್ರೀ ಗುರುಮಹಾಂತ ಸ್ವಾಮಿಗಳ ವರನ್ನು ಬಲ್ಲವರಾಗಿದ್ದಾರೆ. ಈ ಗ್ರಂಥದಲ್ಲಿ ಅವರ ಬಾಲ್ಯ, ವಿದ್ಯಾರ್ಥಿ ಜೀವನ, ಶಿಕ್ಷಣ, ಸಾಧನೆ, ಕಲಬುರ್ಗಿಯ ಗದ್ದುಗೆಮಠ ಹಾಗೂ ಹುಬ್ಬಳ್ಳಿಯ ಕಲಬುರ್ಗಿ ಮಠಗಳ ಪೂಜ್ಯರ ಸೇವೆ ಮಾಡಿದ್ದನ್ನು, ಧಾರವಾಡ ಮುರುಘಾಮಠದಲ್ಲಿ ಹತ್ತು ವರ್ಷ ಪೂಜ್ಯ ಶ್ರೀ ಮ.ನಿ.ಪ್ರ. ಮಹಾಂತಪ್ಪಗಳ ಸೇವೆಗೈದಿರುವುದನ್ನು, ಅನಂತರ ಪೂಜ್ಯರಾದ ಚಿತ್ರದುರ್ಗದ ಶ್ರೀ ಮುರುಘಾಶರಣರ ಸಾನಿಧ್ಯದಲ್ಲಿ ಹತ್ತು ವರ್ಷ ಸೇವೆಯ ಸಾಧನೆ, ಎಲ್ಲವನ್ನೂ ತುಂಬಾ ಚೆನ್ನಾಗಿ ಬರೆದಿದ್ದಾರೆ.

ನಮ್ಮ ಚಿತ್ತರಗಿ ಸಂಸ್ಥಾನಮಠ ಇಳಕಲ್ಲ ಹಾಗೂ ಸವದಿಯ ಸಂಗನಬಸವ ಮಠಗಳ ಅಧಿಪತಿಗಳಾಗಿ ಈ ೧೦-೧೨ ವರುಷಗಳ ಕಾಲ ಮಾಡಿರುವ ಬಸವ ಸೇವೆಯನ್ನು, ತುಂಬಾ ಸರಳವಾಗಿ ಚಿತ್ರಿಸಿದ್ದಾರೆ.

ಕಳೆದ ೪೦ ವರುಷಗಳಿಂದ ನಮ್ಮೊಂದಿಗೆ ಬಸವತತ್ವ ಪ್ರಸಾರದ ಮಹಾ-ಮಣಿಹದಲ್ಲಿ ಕಿಂಕರಭಾವದಿಂದ ಸೇವೆಗೈಯುತ್ತಾ ಕಲ್ಯಾಣದಪ್ಪ ಬಸವಣ್ಣನವರ, ಚಿತ್ತರಗಿ ಶ್ರೀ ವಿಜಯಮಹಾಂತ ಶಿವಯೋಗಿಗಳವರ ಕೃಪೆಗೆ ಪಾತ್ರರಾಗಿದ್ದಾರೆ. ಸಿದ್ಧಣ್ಣನವರಿಂದ ಶರಣ ಸಾಹಿತ್ಯ ಸೇವೆ ನಿರಂತರವಾಗಿ ಮುಂದುವರೆಯಲಿ, ವಿಶ್ವಗುರು ಬಸವಣ್ಣನವರ ಕರುಣೆ ಅವರ ಮೇಲಿರಲಿ ಎಂದು ಶುಭ ಹಾರೈಸುವೆವು.

ಶರಣು-ಶರಣಾರ್ಥಿಗಳು

॥ ಓಂ ಶ್ರೀ ಗುರು ಬಸವಲಿಂಗಾಯ ನಮಃ ॥

## ಲೇಖಕರ ನಿವೇದನೆ

ಪರಮಪೂಜ್ಯರಾದ ಶ್ರೀ ಮ.ನಿ.ಪ್ರ. ಡಾ. ಮಹಾಂತ ಶಿವಯೋಗಿಗಳು ಈ ಯುಗಮಾನದ ಬಸವತತ್ವ ನಿಷ್ಠ ಗಣಾಚಾರದ ಧೀರ ಜಂಗಮಪುಂಗವರು. ವಿಶ್ವಗುರು ಬಸವಣ್ಣನವರ ತತ್ವ-ಸಿದ್ಧಾಂತ-ದರ್ಶನವನ್ನು ಸ್ವತಃ ಆಚರಿಸುತ್ತಾ, ಬಸವತತ್ವದ ಬೆಳಕಿನಲ್ಲಿ ಸಮಾಜವನ್ನು ಮುನ್ನಡೆಸುತ್ತಿರುವರು. ಇಂತಹ ಪೂಜ್ಯರು ಪ್ರಾರಂಭಿಸಿದ ಶರಣಸಿದ್ಧಾಂತ ವಿದ್ಯಾಪೀಠದ ಶಿವಾನುಭವ ಶಿಬಿರಗಳು, ಮಹಾಂತ ಜೋಳಿಗೆಯ ಕಾರ್ಯಕ್ರಮಗಳು ನಾಡಿನ ಜನತೆಯ ಕಲ್ಯಾಣ ಬಯಸಿರುವ, ಅದ್ಭುತ ಯೋಜನೆಗಳಾಗಿವೆ.

ಹಿರಿಯ ಪೂಜ್ಯರು ಸಾಗಿರುವ ಬಸವ ಮಾರ್ಗದಲ್ಲಿ ಅವರ ಜಂಗಮ ಕಾಯಕವನ್ನು ಸಮರ್ಥವಾಗಿ ಮುನ್ನಡೆಸುತ್ತಿರುವ ಕಿರಿಯ ಶ್ರೀಗಳಾಗಿರುವ ಶ್ರೀ ಮ.ನಿ.ಪ್ರ. ಗುರುಮಹಾಂತ ಸ್ವಾಮಿಗಳು ಅಷ್ಟೇ ಶ್ರದ್ಧೆ-ನಿಷ್ಠೆಗಳಿಂದ ಬಸವತತ್ವ ಪ್ರಸಾರದ ಮಹಾಮಣಿಹ ಪೂರೈಸುತ್ತಿದ್ದಾರೆ. ಚಿತ್ತರಗಿ ಸಂಸ್ಥಾನಮಠ ಇಲಕಲ್ಲದ ೨೦ನೇ ಪೀಠಾಧಿಪತಿಗಳಾಗಿ ಕ್ರಿ.ಶ. ೨೦೦೩-೦೪ ರಲ್ಲಿ ಬಂದಿರುವ ಪೂಜ್ಯ ಶ್ರೀ ಗುರುಮಹಾಂತ ಸ್ವಾಮಿಗಳವರು ಪೂಜ್ಯ ಹಿರಿಯ ಗುರುಗಳ ಸೇವೆಯನ್ನು ಭಕ್ತಿಯಿಂದ ಮಾಡುತ್ತ, ಇಳಕಲ್ಲ ಸಂಸ್ಥಾನಮಠದ ಹಾಗೂ ಎಲ್ಲ ಶಾಖಾ ಮಠಗಳ ಕಾರ್ಯಕ್ರಮಗಳನ್ನು ಭಕ್ತರ ಸಹಯೋಗದೊಂದಿಗೆ ಮಾಡುತ್ತಿದ್ದಾರೆ.

ಕ್ರಿ.ಶ. ೨೦೦೫ ರಲ್ಲಿ ಅಥಣಿ ತಾಲೂಕಿನ ಸವದಿ ಗ್ರಾಮದ ಶ್ರೀ ಸಂಗನಬಸವ ಮಠ (ವಿರಕ್ತಮಠ)ದ ಮಠಾಧೀಶರಾಗಿಯೂ ಹಿರಿಯ ಪೂಜ್ಯರ ಮಾರ್ಗದರ್ಶನದಲ್ಲಿ, ಭಕ್ತರ ಸಹಕಾರದೊಂದಿಗೆ ನಿರಂತರವಾಗಿ ಮಾಸಿಕ ಶಿವಾನುಭವ, ಶರಣ ಸಂಸ್ಕೃತಿ ಮಹೋತ್ಸವ ವೈಭವಪೂರ್ಣವಾಗಿ ಆಚರಿಸುತ್ತಿದ್ದಾರೆ. ಇಂತಹ ಪೂಜ್ಯರ ಜೀವನ-ಸಾಧನೆಯ ಕುರಿತು ಒಂದು ಪುಸ್ತಕ ಬರೆಯಲು ವಿನಂತಿಸಿದ ಸವದಿಯ ಶ್ರೀ ಶ್ರೀಶೈಲ ಬಾಳಿಕಾಯಿ ಹಾಗೂ ಶ್ರೀಮಠದ ಭಕ್ತರಿಗೆ ಶರಣುಗಳು. ಪೂಜ್ಯ ಶ್ರೀ ಗುರುಮಹಾಂತ ಸ್ವಾಮಿಗಳು ಧಾರವಾಡದಲ್ಲಿ ಶ್ರೀ ಮುರುಘಾಮಠದಲ್ಲಿದ್ದು ಓದುವ ಕಾಲದಿಂದಲೂ (೧೯೮೧ ರಿಂದ) ನಾನು ಅವರ ಸಾತ್ವಿಕತೆ, ಸೇವಾಜೀವನ ನೋಡಿದ್ದೇನೆ. ಅಂದಿನಿಂದ ಇಂದಿನವರೆಗೂ ಅದೇ ಸರಳತೆ, ಸದುವಿನಯ, ಬಸವಭಕ್ತಿ ಕಾಣುತ್ತಿದ್ದೇನೆ.

ಪೂಜ್ಯರ ಕುರಿತು ಈ ಪುಸ್ತಕ ಬರೆಯುವ ಪೂರ್ವದಲ್ಲಿ ಅವರ ಜನ್ಮಸ್ಥಳ ನರಗುಂದಕ್ಕೆ ಹೋಗಿ, ಶ್ರೀ ಚೆನ್ನಬಸಪ್ಪ ಕಂಠಿ, ಶ್ರೀ ಚೌಕಿಮಠ, ಶ್ರೀ ಸಾಲೋಟಗಿಮಠ ಗುರುಗಳನ್ನು ಭೆಟ್ಟಿಯಾಗಿ ಮಾಹಿತಿ ಸಂಗ್ರಹಿಸಿರುವೆ. ಪೂಜ್ಯರ ಪೂರ್ವಾಶ್ರಮದ ಮನೆ, ಆ ಓಣಿಯ ಹಿರಿಯರ ಭೆಟ್ಟಿ, ಬಂಧುಗಳ ಭೆಟ್ಟಿಯಾಗಿ ಅವರ ಬಾಲ್ಯದ ದಿನಗಳ, ವಿದ್ಯಾರ್ಥಿ ಜೀವನ, ಸಾಧನೆ ಕುರಿತು ವಿಷಯ ಸಂಗ್ರಹಿಸಿ ಈ ಕೃತಿ ರಚಿಸಿರುವೆ. ಶ್ರೀ ಸಂತೋಷ ಲೂತಿಮಠ, ಡಾ. ಶಂಭುಲಿಂಗಪ್ಪ ಹೆಗಡಾಳ ಅವರ ಸಹಕಾರ ನೆನೆಯುವೆ. ಈ ಗ್ರಂಥ ಬರೆಯಲು ಒಪ್ಪಿಗೆ ನೀಡಿದ ಹಿರಿಯ ಪೂಜ್ಯ ಅಪ್ಪಗಳಿಗೆ ಭಕ್ತಿ ಶರಣುಗಳು, ಧಾರವಾಡದ ರವೀಂದ್ರ ವಿಶ್ವಜ್ಞ ಹಾಗೂ ರಾಮದುರ್ಗದ ಶ್ರೀ ಹುಚ್ಚೇಶ್ವರ ಮುದ್ರಣಾಲಯದವರಿಗೂ ಶರಣು-ಶರಣಾರ್ಥಿಗಳು.

**-ಸಿದ್ಧಣ ಲಂಗೋಟಿ (ಚಾಂದಕವಠೆ)**

॥ ಓಂ ಶ್ರೀ ಗುರು ಬಸವಲಿಂಗಾಯ ನಮಃ ॥

## ಗ್ರಂಥ ಪ್ರಕಟಣಾ ದಾಸೋಹಿಗಳಾದ

## ಶರಣ ಸಿದ್ದಪ್ಪ ನಾಗಪ್ಪ ಅಂಗಡಿ (ಶೆಟ್ಟರ್) ಸಾ॥ ಇಲಕಲ್ಲ.

ಬಸವಭಕ್ತಿ ಸಂಪನ್ನ ಶರಣರಾದ ಶ್ರೀ ಸಿದ್ದಪ್ಪ ಅಂಗಡಿ (ಶೆಟ್ಟರ್) ಇವರು ಮೂಲತಃ ರಾಯಚೂರ ಜಿಲ್ಲೆಯ ಸಿಂಧನೂರ ತಾಲೂಕಿನ ಬಪ್ಪರ ಎಂಬ ಗ್ರಾಮದವರು. ಅಲ್ಲಿ ಶರಣದಂಪತಿಗಳಾಗಿದ್ದ ಶ್ರೀ ನಾಗಪ್ಪ ಹಾಗೂ ಶ್ರೀಮತಿ ಈರಮ್ಮನವರ ಉದರದಲ್ಲಿ ೧೯೩೪ ರಲ್ಲಿ ಜನಿಸಿದವರು. ಇವರು ನಾಲ್ಕು ವರ್ಷದ ಬಾಲಕನಾಗಿದ್ದಾಗ ೧೯೩೮ ರಲ್ಲಿ ಪ್ಲೇಗ್ ಬೇನೆ ಬಂದು ಅಜ್ಜಿ ಕರಬಸಮ್ಮತಾಯಿ ಈರಮ್ಮ ತಂದೆ ನಾಗಪ್ಪ ಹಾಗೂ ತಮ್ಮ ವೀರಣ್ಣ ನಾಲ್ಕು ಜನ ಲಿಂಗೈಕ್ಯರಾದರು. ಆಗ ಇವರ ದೊಡ್ಡಮ್ಮ ಸೂಗಮ್ಮ ಹಾಗೂ ದೊಡ್ಡಪ್ಪ ಈಶ್ವರಪ್ಪ ಶೆಟ್ರು ಬಪ್ಪರಕ್ಕೆ ಬಂದು ತಮ್ಮ ತಂಗಿಯ ಕುಡಿ ಬೆಳೆಯಲಿ ಎಂಬ ಸದ್ಭಾವನೆಯಿಂದ ಇಳಕಲ್ಲದ ತಮ್ಮ ಮನೆಗೆ ತಂದು ಸಾಕಿ-ಸಲಹಿ ಬೆಳೆಸಿದರು. ಈ ದಂಪತಿಗಳಿಗೆ ವೀರಪ್ಪ ಎಂಬ ಒಬ್ಬನೇ ಮಗ. ಅವರು ಸಿದ್ದಪ್ಪನವರನ್ನು ತಮ್ಮನಂತೆ ಪ್ರೀತಿತೋರಿ ಬೆಳೆಸಿದರು. ಅಣ್ಣ ವೀರಪ್ಪನವರು ಸಿದ್ದಪ್ಪನವರನ್ನು ಆಗಿನ ಕಾಲದ ಮುಲ್ಕಿ ಪರೀಕ್ಷೆ ವರೆಗೆ ಓದಿಸಿ, ತಮ್ಮ ವ್ಯವಹಾರದಲ್ಲಿ ತೊಡಗಿಸಿಕೊಂಡರು. ದೊಡ್ಡಪ್ಪ ಲಿಂಗೈಕ್ಯರಾದ ನಂತರ ಅಣ್ಣ ವೀರಪ್ಪನವರ ಕಲ್ಯಾಣ ಮಹೋತ್ಸವವವು ೧೯೫೦ರಲ್ಲಿ ಇಂಗಳೇಶ್ವರದ ಶರಣ ದಂಪತಿಗಳಾದ ಶ್ರೀ ದುಂಡಪ್ಪ ನಂದಿ ಹಾಗೂ ಶ್ರೀಮತಿ ನೀಲಮ್ಮನವರ ಮಗಳು ಚಿ॥ ನಿಂಗಮ್ಮನವರೊಂದಿಗೆ ಜರುಗಿತು. ಈ ದಂಪತಿಗಳಿಗೆ ಬಸವರಾಜ, ರತ್ನಮ್ಮ, ಸಂಗಣ್ಣ, ಮಲ್ಲಣ್ಣ, ಸುಲೋಚನಾ, ಈಶ್ವರಪ್ಪ, ವಿಜಯಕ್ಕಾ ಎಂದು ಏಳು ಜನ ಮಕ್ಕಳು ಜನಿಸಿದರು.

**ಶ್ರೀ ಸಿದ್ದಪ್ಪನವರ ಕಲ್ಯಾಣ ಮಹೋತ್ಸವವು** ೧೯೫೪ ರಲ್ಲಿ ಹುನಗುಂದ ತಾಲೂಕಿನ ಅಮರವಾಡಗಿ ಗ್ರಾಮದ ಶರಣ ದಂಪತಿಗಳಾದ ಜಡಿಯಪ್ಪ ಅರಳಿ ಹಾಗೂ ಶರಣೆ ಗಂಗಮ್ಮ ಇವರ ಮಗಳಾದ **ಚಿ॥ ಶಿವಮ್ಮರೊಂದಿಗೆ** ಜರುಗಿತು. ಈ ದಂಪತಿಗಳಿಗೂ ಈಶ್ವರಪ್ಪ, ತೋಟವ್ವ, ವೀರಭದ್ರಪ್ಪ, ನಾಗಪ್ಪ, ಮಹಾಂತಪ್ಪ, ಶರಣಪ್ಪ, ಸೂಗಪ್ಪ ಎಂಬ ಏಳು ಜನ ಮಕ್ಕಳು ಜನಿಸಿದರು.

ಮೊದಲನೆಯವರು ಮಗ ಶ್ರೀ ಈಶ್ವರಪ್ಪ-ಸೊಸೆ ಅನಸೂಯಾ, ಈ ದಂಪತಿಗಳಿಗೆ ಬಸವರಾಜ, ಜ್ಯೋತಿ, ಅಕ್ಕಮ್ಮ ಎಂಬ ಮಕ್ಕಳಿದ್ದಾರೆ. ಶ್ರೀ ಬಸವರಾಜ-ನೀಲಮ್ ದಂಪತಿಗಳಿಗೆ ಚಿ॥ ಅಕುಲ ಎಂಬ ಮಗನಿದ್ದಾನೆ. ಜ್ಯೋತಿ-ಬಸವರಾಜ ಅರಳಿ ದಂಪತಿಗಳಿಗೆ ಚಿ॥ ಸಾತ್ವಿಕ ಎಂಬ ಮಗನಿದ್ದಾನೆ. ಅಕ್ಕಮ್ಮ-ಸುರೇಶ ಅರಳಿ ದಂಪತಿಗಳಿಗೆ ಚಿ॥ ಬಸವಾದಿತ್ಯ ಎಂಬ ಮಗನಿದ್ದಾನೆ.

ಎರಡನೆಯವಳು ಮಗಳು ತೋಟವ್ವ-ಅಳಿಯ ಸಂಗಪ್ಪ ಅರಳಿ. ಈ ದಂಪತಿ-ಗಳಿಗೆ ಸುನಿತಾ, ಸುರೇಶ, ವಿಜಯಕುಮಾರ, ಜಗದೀಶ ಎಂಬ ಮಕ್ಕಳಿದ್ದಾರೆ.

ಮೂರನೆಯವರು ಮಗ ಶ್ರೀ ವೀರಭದ್ರಪ್ಪ-ಸೊಸೆ ದಾನಮ್ಮ ಈ ದಂಪತಿಗಳಿಗೆ ರವಿಕುಮಾರ ಹಾಗೂ ಮಹಾಂತೇಶ್ವರಿ ಎಂಬ ಮಕ್ಕಳಿದ್ದಾರೆ. ಶ್ರೀ ರವಿಕುಮಾರ-ಶ್ರೀಮತಿ ದೀಪಾ ದಂಪತಿಗಳಿಗೆ ಚಿ॥ ವಿಜಯಮಹಾಂತೇಶ ಎಂಬ ಪುತ್ರನಿದ್ದಾನೆ. ಶ್ರೀಮತಿ ಮಹಾಂತೇಶ್ವರಿ- ಶ್ರೀ ವಿಜಯಕುಮಾರ ಅರಳಿ ದಂಪತಿಗಳಿಗೆ ಚಿ॥ ಬಸವಪ್ರಮಥ ಎಂಬ ಮಗನಿದ್ದಾನೆ.

ನಾಲ್ಕನೆಯವರು ಮಗ ಶ್ರೀ ನಾಗಪ್ಪ-ಸೊಸೆ ಶ್ರೀಮತಿ ಶೋಭಾ. ಈ ದಂಪತಿಗಳು ಮಹಾಂತ ಕಿರಾಣಾ ಸ್ಟೋರ್ಸ ವ್ಯಾಪಾರ ಕಾಯಕದಲ್ಲಿದ್ದಾರೆ.

ಐದನೆಯವರು ಮಗ ಶ್ರೀ ಮಹಾಂತಪ್ಪ- ಸೊಸೆ ಶ್ರೀಮತಿ ತೇಜಸ್ವಿನಿ. ಈ ದಂಪತಿಗಳಿಗೆ ಚಿ॥ ಪೂಜಾ ಹಾಗೂ ಚಿ॥ ದರ್ಶನ ಎಂಬ ಮಕ್ಕಳಿದ್ದಾರೆ.

ಆರನೆಯವರು ಮಗ ಶ್ರೀ ಶರಣಪ್ಪ-ಸೊಸೆ ಶ್ರೀಮತಿ ಸುನೀತಾ ಈ ದಂಪತಿ ಗಳಿಗೆ ಚಿ॥ ಪ್ರಸನ್ನ ಹಾಗೂ ಚಿ॥ ನೀಲಾಂಬಿಕಾ ಎಂಬ ಮಕ್ಕಳಿದ್ದಾರೆ.

ಏಳನೆಯವರು ಮಗ ಶ್ರೀ ಸೂಗೂರೇಶ - ಸೊಸೆ ಶ್ರೀಮತಿ ವಿಜಯಲಕ್ಷ್ಮಿ ಈ ದಂಪತಿಗಳಿಗೆ ಚಿ॥ ಪ್ರದೀಪ ಹಾಗೂ ಚಿ॥ ವಚನಶ್ರೀ ಎಂಬ ಮಕ್ಕಳಿದ್ದಾರೆ.

ಈ ರೀತಿಯಾಗಿ ಏಳು ಜನ ಮಕ್ಕಳು, ಆರು ಸೊಸೆಯಂದಿರು, ಒಬ್ಬ ಅಳಿಯ ಹಾಗೂ ೧೫ ಜನ ಮೊಮ್ಮಕ್ಕಳು ಮತ್ತು ೫ ಜನ ಮರಿ ಮೊಮ್ಮಕ್ಕಳನ್ನು ಹೊಂದಿರುವ ಶರಣ ಸಂಸಾರವು ಶರಣ ಸಿದ್ದಪ್ಪನವರು ಹಾಗೂ ಶರಣೆ ಶಿವಮ್ಮನವರದಾಗಿದೆ.

ಈ ಶರಣ ಮನೆತನವು ಧರ್ಮಗುರು ಬಸವಣ್ಣನವರಲ್ಲಿ, ಪೂಜ್ಯ ಲಿಂ. ವಿಜಯ ಮಹಾಂತ ಶಿವಯೋಗಿಗಳಲ್ಲಿ, ಪೂಜ್ಯ ಡಾ. ಮಹಾಂತ ಶಿವಯೋಗಿಗಳವರಲ್ಲಿ ಹಾಗೂ ಪೂಜ್ಯ ಶ್ರೀ ಗುರುಮಹಾಂತ ಸ್ವಾಮಿಗಳವರಲ್ಲಿ ಅಚಲ ಶ್ರದ್ಧೆ-ನಿಷ್ಠೆ ಇರಿಸಿಕೊಂಡು ವ್ಯಾಪಾರ ಕಾಯಕ-ದಾಸೋಹ-ಪ್ರಸಾದದ ಶರಣ ಜೀವನ ಬಾಳುತ್ತಿದೆ.

**'ಬಸವಯೋಗಿ ಗುರುಮಹಾಂತ ಸ್ವಾಮಿಗಳು'** ಎಂಬ ಗ್ರಂಥ ಪ್ರಕಟಣಾ ದಾಸೋಹ ಸೇವೆಗೈದಿರುವ ಶರಣ ಸಿದ್ದಪ್ಪನವರು ಅಂಗಡಿ (ಶೆಟ್ಟರ್) ಮನೆತನದ ಮೇಲೆ ಬಸವಾದಿ ಪ್ರಮಥರ ಹಾಗೂ ವಿಜಯಮಹಾಂತ ಶಿವಯೋಗಿಗಳ ಕರುಣೆ, ಉಭಯ ಶ್ರೀಗಳ ಆಶೀರ್ವಾದ ನಿರಂತರವಾಗಿರಲಿ ಎಂದು ಪ್ರಾರ್ಥಿಸುವೆವು.

**-ಪ್ರೊ. ಸಿದ್ಧಣ್ಣ ಲಂಗೋಟಿ (ಚಾಂದಕವಠೆ)**

**ಗ್ರಂಥ ಕರ್ತೃ**

# ಪರಿವಿಡಿ

## ಬಸವ ಕಾಯಕಯೋಗಿ ಪೂಜ್ಯ ಶ್ರೀ ಗುರುಮಹಾಂತ ಸ್ವಾಮಿಗಳು

### ಭಾಗ-೧



### ಭಾಗ-೨



ವಿಶ್ವಗುರು
ಬಸವಣ್ಣನವರು



ಶರಣ ಸಿದ್ಧಲಿಂಗೇಶ್ವರರು



ಶರಣ ಅಲ್ಲಮ ಪ್ರಭುದೇವರು



ಲಿಂ. ಶ್ರೀ ವಿಜಯಮಹಾಂತ
ಶಿವಯೋಗಿಗಳು



ಪೂಜ್ಯಶ್ರೀ ಡಾ. ಮಹಾಂತ ಶಿವಯೋಗಿಗಳು



ಪೂಜ್ಯಶ್ರೀ ಗುರುಮಹಾಂತ ಸ್ವಾಮಿಗಳು

## ಇಳಕಲ್ಲ ವಿಜಯ ಮಹಾಂತ ಶಿವಯೋಗಿಗಳವರ ರಥೋತ್ಸವ



ರಥದಲ್ಲಿ ಧರ್ಮಗ್ರಂಥ ವಚನ ತಾಡೋಲೆಗಳ ಉತ್ಸವ

## ಇಳಕಲ್ಲ ಶ್ರೀಮಠದ ಅಡ್ಡಪಲ್ಲಕ್ಕಿ ಮಹೋತ್ಸವ



ಪಲ್ಲಕ್ಕಿಯಲ್ಲಿ ಧರ್ಮಗ್ರಂಥ ವಚನಸಾಹಿತ್ಯದ ಗ್ರಂಥಗಳು.

## ಚಿತ್ತರಗಿ ಸಂಸ್ಥಾನಮಠ ಇಳಕಲ್ಲ ಪಟ್ಟಾಧಿಕಾರ ಮಹೋತ್ಸವ [೧೨-೯-೨೦೦೪]




ಡಾ. ಮಹಾಂತ ಶಿವಯೋಗಿಗಳಿಂದ – ಶ್ರೀ ಗುರುಮಹಾಂತಸ್ವಾಮಿಗಳಿಗೆ
ಪ್ರತಿಜ್ಞಾ ವಚನ -- ಬೋಧನೆ

## ಜ್ಞಾನಯೋಗಿ ಶ್ರೀ ಸಿದ್ಧೇಶ್ವರ ಸ್ವಾಮಿಗಳವರಿಂದ ಅನುಭಾವ




ಗದಗ, ಚಿತ್ರದುರ್ಗ, ಬೆಳಗಾವಿ, ನಿಡಸೋಸಿ, ಬಾಗಲಕೋಟೆ, ಪಾಂಡೋಮಟ್ಟಿ
ಹುಲಸೂರು, ಭಾಲ್ಕಿ, ಗುಳೇದಗುಡ್ಡ, ವಿಜಾಪುರ ಶ್ರೀಗಳು ಡಾ. ದೇಜಗೌ,
ಡಾ. ಎಂ. ಎಂ. ಕಲಬುರ್ಗಿ, ಶ್ರೀ ಅರವಿಂದ ಜತ್ತಿ, ಪ್ರೊ. ಸಿದ್ಧಣ್ಣ ಲಂಗೊಟಿ

ಸವದಿ ಸಂಗನಬಸವಮಠ (ವಿರಕ್ತಮಠ)ದ ಪಟ್ಟಾಧಿಕಾರ ಮಹೋತ್ಸವ (೨೦೦೫)




ಚಿತ್ತರಗಿ-ಇಳಕಲ್ಲ, ಗದಗ, ಬಾಗಲಕೋಟೆ, ಶಿರೂರ, ರಬಕವಿ, ಶ್ರೀಗಳು

ಸವದಿ ಸಂಗಬಸವಮಠದ ಪಟ್ಟಾಧಿಕಾರ ಮಹೋತ್ಸವ (೨೦೦೫)




ಮನಗುಂಡಿ, ಚಿತ್ತರಗಿ-ಇಳಕಲ್ಲ, ಬಾಗಲಕೋಟೆ, ಶಿರೂರ, ರಬಕವಿ, ತೇರದಾಳ ಶ್ರೀಗಳು

ಪೂಜ್ಯ ಶ್ರೀ ಗುರುಮಹಾಂತ ಶ್ರೀಗಳವರ ಪಟ್ಟಾಧಿಕಾರ ಮಹೋತ್ಸವದಲ್ಲಿ :



ಶ್ರೀ ಶಂಕರ ಬಿದರಿ ಪೋಲಿಸ್ ಮಹಾವರಿಷ್ಠರು ಕರ್ನಾಟಕ ರಾಜ್ಯ ಇವರೊಂದಿಗೆ
ಹಿರಿಯ ಹಾಗೂ ಕಿರಿಯ ಶ್ರೀಗಳವರು

ಶರಣ ಸಂಸ್ಕೃತಿ ಮಹೋತ್ಸವದಲ್ಲಿ ಕೂಡಲಸಂಗಮ ಜಗದ್ಗುರುಗಳು :




ಪ್ರೊ. ಸಿದ್ಧಣ್ಣ ಲಂಗೋಟಿ, ಗದಗ, ಇಳಕಲ್ಲ, ಸವದಿ ಶ್ರೀಗಳವರು

ನಾಡೋಜ ಡಾ. ಪಾಟೀಲ ಪುಟ್ಟಪ್ಪ, ಹುಬ್ಬಳ್ಳಿ ಅವರಿಗೆ ಗೌರವ :



ಬಸವಗುರು ಕಾರುಣ್ಯ ಪ್ರಶಸ್ತಿಯೊಂದಿಗೆ ಒಂದು ಲಕ್ಷ ರೂ॥ ಸಮರ್ಪಣೆ

ಖ್ಯಾತ ಸಂಶೋಧಕ ಡಾ. ಎಂ. ಎಂ. ಕಲಬುರ್ಗಿ, ಧಾರವಾಡ ಅವರಿಗೆ ಗೌರವ :



ಬಸವಗುರು ಕಾರುಣ್ಯ ಪ್ರಶಸ್ತಿ – ಒಂದು ಲಕ್ಷ ರೂಪಾಯಿ ಗೌರವ ಸಮರ್ಪಣೆ.

ಪ್ರೊ. ಸಿದ್ಧಣ್ಣ ಲಂಗೋಟಿ – ಡಾ. ಕಲ್ಯಾಣಮ್ಮ ದಂಪತಿಗಳಿಗೆ
ಶರಣ ಅಂಬಿಗ ಚೌಡಯ್ಯ ಗಣಾಚಾರ ಪ್ರಶಸ್ತಿ – ೨೦೧೧



ಚಿತ್ತರಗಿ–ಇಳಕಲ್ಲ ಉಭಯ ಶ್ರೀಗಳು, ಶ್ರೀ ಬಿರಾದಾರ, ಶ್ರೀ ಲಿಂಗಣ್ಣ ಸತ್ಯಂಪೇಟೆ
ಶ್ರೀ ಪಿ. ಎಂ. ಕಣವಿ, ಶ್ರೀ ಅಂಬಿಗ ಕುಮಾರ ಚೌಡಯ್ಯ ಶರಣರು

ಬಸವ ಬೆಳಗು ಪತ್ರಿಕೆಯ ಬೆಳ್ಳಿಹಬ್ಬ – ಸಂಚಿಕೆ ಬಿಡುಗಡೆ :



ಪ್ರೊ. ಸಿದ್ಧಣ್ಣ ಲಂಗೋಟಿ, ಶ್ರೀ ಲಿಂಗಣ್ಣ ಸತ್ಯಂಪೇಟೆ, ಚಿತ್ತರಗಿ–ಇಳಕಲ್ಲದ
ಶ್ರೀ ಗುರುಮಹಾಂತ ಸ್ವಾಮಿಗಳು, ನಾಗಣಸೂರು, ಉಪ್ಪಲದೊಡ್ಡೆ ಶ್ರೀಗಳು.

ವಿಶ್ವಸಂಸ್ಥೆಯ ಜಾಗತಿಕ ಪ್ರಶಸ್ತಿ ಪುರಸ್ಕೃತರಾದ
ಶರಣೆ ಅಶ್ವಿನಿ ಅಂಗಡಿ ಅವರಿಗೆ ಗೌ|| ಸತ್ಕಾರ :




ಪೂಜ್ಯ ಡಾ. ಮಹಾಂತ ಶ್ರೀಗಳು, ಶ್ರೀ ಗುರುಮಹಾಂತ ಶ್ರೀಗಳು, ಅಕ್ಕ ಅನ್ನಪೂರ್ಣ

ಶರಣೆ ಸಾಲುಮರದ ತಿಮ್ಮಕ್ಕಳಿಗೆ 'ಬಸವ ಕಲ್ಪವೃಕ್ಷನಿಧಿ' ಪುರಸ್ಕಾರ :



ಚಿತ್ತರಗಿ-ಇಳಕಲ್ಲ ಉಭಯ ಶ್ರೀಗಳು ಶ್ರೀ ಲಕ್ಷ್ಮಣ ಸವದಿ ಶಾಸಕರು
ಶಿರೂರ, ಜನವಾಡ, ಪಾಂಡೋಮಟ್ಟಿ ಶ್ರೀಗಳು, ಪ್ರೊ. ಸಿದ್ಧಣ್ಣ ಲಂಗೋಟಿ.

ಚಿತ್ರದುರ್ಗ ಶ್ರೀ ಮುರುಘಾ ಶರಣರಿಗೆ ಗೌರವ - ಸತ್ಕಾರ :



ಪೂಜ್ಯ ಡಾ. ಮಹಾಂತ ಶ್ರೀಗಳು ಹಾಗೂ ಶ್ರೀ ಗುರುಮಹಾಂತ ಶ್ರೀಗಳವರಿಂದ

ಶ್ರೀ ವಿಜಯಮಹಾಂತೇಶ ತೀರ್ಥ ಶಿರೂರದಲ್ಲಿ - ನಿಸರ್ಗ ಚಿಕಿತ್ಸಾ - ಶಿವಯೋಗ ಕೇಂದ್ರ ನೂತನ ಕಟ್ಟಡ ಉದ್ಘಾಟನಾ ಸಮಾರಂಭ :




ಚಿತ್ತರಗಿ-ಇಳಕಲ್ಲ, ಶಿರೂರ, ರಬಕವಿ, ಜನವಾಡ ಶ್ರೀಗಳು, ಪ್ರೊ. ಸಿದ್ಧಣ್ಣ ಲಂಗೋಟಿ.

ಆಸ್ಟ್ರೇಲಿಯಾ ದೇಶದ ಬ್ರಿಸ್‌ಬೇಸದಲ್ಲಿ ಶ್ರೀ ಗುರುಮಹಾಂತ ಸ್ವಾಮಿಗಳು :



ಆಸ್ಟ್ರೇಲಿಯಾ ದೇಶದ ಅಕ್ಕನಬಳಗದ ತಾಯಂದಿರು

ಅಮೇರಿಕಾ ದೇಶದಲ್ಲಿ ಜಾಗತಿಕ ಸೌಹಾರ್ದತಾ ಯಾತ್ರೆ :



ಪೂಜ್ಯ ಶ್ರೀ ಚಿತ್ರದುರ್ಗ ಶರಣರು, ಶ್ರೀ ಗುರುಮಹಾಂತ ಸ್ವಾಮಿಗಳು,
ಶ್ರೀ ಹುಲಸೂರು ಶ್ರೀಗಳು, ಪ್ರೊ. ಸಿದ್ಧಣ್ಣ ಲಂಗೋಟಿ, ಡಾ. ಕಲ್ಯಾಣಮ್ಮ ಲಂಗೋಟಿ.

ಇಳಕಲ್ಲ ಶ್ರೀಮಠದಲ್ಲಿ ಶ್ರೀ ಗುರುಮಹಾಂತ ಸ್ವಾಮಿಗಳಿಂದ ಸಹಜ - ಶಿವಯೋಗ :



ಚಿತ್ತರಗಿ-ಇಳಕಲ್ಲ ಡಾ. ಮಹಾಂತ ಶ್ರೀಗಳು, ಸಿದ್ಧಯ್ಯನಕೋಟೆ, ಶ್ರೀಗಳು.



ಸಹಜ ಶಿವಯೋಗದಲ್ಲಿ ಪಾಲ್ಗೊಂಡ ಶರಣ - ಶರಣೆಯರು - ಇಳಕಲ್ಲ

## ಅಕ್ಕ ನಾಗಮ್ಮ ಜಯಂತ್ಯುತ್ಸವ - ಹಾಲು ಕುಡಿವ ಹಬ್ಬ ಆಚರಣೆ :



ಇಳಕಲ್ಲ ಶಾಲೆ – ಕಾಲೇಜುಗಳ ಸಹಸ್ರಾರು ವಿದ್ಯಾರ್ಥಿಗಳಿಗೆ ಪೂಜ್ಯರು ಹಾಲು ಕುಡಿಸುತ್ತಿರುವುದು.

## ವಿಶ್ವಗುರು ಬಸವಣ್ಣನವರ ವಚನಗಳು – ಗ್ರಂಥ ಬಿಡುಗಡೆ.



ಗದಗ, ಚಿತ್ತರಗಿ – ಇಳಕಲ್ಲ ಶ್ರೀಗಳು, ಅಕ್ಕ ಅನ್ನಪೂರ್ಣ ತಾಯಿ ಶ್ರೀ ತಂಗಡಗಿ ಸಚಿವರು, ಶ್ರೀ ವಿಜಯಾನಂದ ಕಾಶಪ್ಪನವರ ಶಾಸಕರು, ಡಾ. ಎನ್. ಜಿ. ಮಹಾದೇವಪ್ಪ, ಪ್ರೊ. ಸಿದ್ಧಣ್ಣ ಲಂಗೋಟಿ

# ಗ್ರಂಥ ಪ್ರಕಟನಾ ದಾಸೋಹಿಗಳು



ಶರಣ ದಂಪತಿಗಳಾದ
ಶರಣ ಸಿದ್ದಪ್ಪ. ನಾಗಪ್ಪ. ಅಂಗಡಿ (ಶೆಟ್ಟರ) – ಶರಣೆ ಶಿವಮ್ಮ.



ಅಳಿಯ ಬಸವರಾಜ ಅರಳಿ, ಮಗಳು ಜ್ಯೋತಿ, ಮಗ ಬಸವರಾಜ
ಸೊಸೆ–ನೀಲಮ್, ಶರಣ ಈಶ್ವರಪ್ಪ, ಶರಣೆ ಅನಸೂಯಾ
ಅಳಿಯ–ಸುರೇಶ, ಮಗಳು ಅಕ್ಕಮ್ಮ ಮೊಮ್ಮಕ್ಕಳು, ಬಸವಾದಿತ್ಯ, ಸಾತ್ವಿಕ್, ಅಕುಲ




ಮಗ ಚಿ. ಜಗದೀಶ ಮಗ ಶ್ರೀ ಸುರೇಶ, ಸೊಸೆ ಅಕ್ಕಮ್ಮ ಮೊಮ್ಮಗ-ಬಸವಾದಿತ್ಯ
ಶರಣ ಶ್ರೀ ಸಂಗಪ್ಪ ಅರಳಿ, ಶರಣೆ ತೊಟ್ಟವ್ವ. ಮಗ-ವಿಜಯಕುಮಾರ, ಸೊಸೆ-ಮಹಾಂತೇಶ್ವರಿ,
ಮಗಳು-ಸುನಿತಾ, ಅಳಿಯ-ಶರಣಪ್ಪ ಅಂಗಡಿ ಮೊಮ್ಮಕ್ಕಳು. ಚಿ. ಪ್ರಸನ್ನ, ಚಿ. ನೀಲಾಂಬಿಕಾ.



ಮಗ-ರವಿಕುಮಾರ, ಸೊಸೆ-ದೀಪಾ, ಮೊಮ್ಮಗ-ವಿಜಯಮಹಾಂತೇಶ
ಶರಣ ಶ್ರೀ ವೀರಭದ್ರಪ್ಪ ಅಂಗಡಿ ಶರಣೆ ದಾನಮ್ಮ, ಮಗಳು ಮಹಾಂತೇಶ್ವರಿ,
ಅಳಿಯ-ವಿಜಯಕುಮಾರ ಅರಳಿ, ಮೊಮ್ಮಗ ಬಸವ ಪ್ರಮಥ್



ಶರಣ ಶ್ರೀ ನಾಗಪ್ಪ ಸಿದ್ದಪ್ಪ ಅಂಗಡಿ
ಶರಣೆ ಶೋಭಾ ನಾಗಪ್ಪ ಅಂಗಡಿ



ಶರಣ ಶ್ರೀ ಮಹಾತೇಶ ಸಿದ್ದಪ್ಪ ಅಂಗಡಿ
ಶರಣೆ ತೇಜಸ್ವಿನಿ, ಮಗ ಚಿ. ದರ್ಶನ, ಮಗಳು– ಚಿ. ಪೂಜಾ.



ಮಗ ಪ್ರಸನ್ನ, ಶರಣ ಶ್ರೀ ಶರಣಪ್ಪ ಸಿದ್ದಪ್ಪ ಅಂಗಡಿ (ಶೆಟ್ಟರ)
ಶರಣೆ ಸುನಿತಾ, ಮಗಳು ಚಿ. ನೀಲಾಂಬಿಕಾ.



ಮಗ ಚಿ. ಪ್ರದೀಪ, ಶರಣ ಶ್ರೀ ಸೂಗಪ್ಪ ಸಿದ್ದಪ್ಪ ಅಂಗಡಿ
ಶರಣೆ ವಿಜಯಲಕ್ಷ್ಮೀ, ಮಗಳು ಚಿ. ವಚನಶ್ರೀ

॥ ಓಂ ಶ್ರೀಗುರು ಬಸವಲಿಂಗಾಯ ನಮಃ ॥

# ಬಸವ ಕಾಯಕಯೋಗಿ ಗುರುಮಹಾಂತ ಸ್ವಾಮಿಗಳು

## ಭಾಗ-೧

### ೧. ಬಸವಗುರು ಪ್ರಣೀತ ಲಿಂಗಾಯತ ಧರ್ಮ-ಪರಂಪರೆ :

ಹನ್ನೆರಡನೆಯ ಶತಮಾನದಲ್ಲಿ ವಿಶ್ವಗುರು ಬಸವಣ್ಣನವರು ಸಕಲ ಜೀವಾತ್ಮರ ಲೇಸಿಗಾಗಿ, ಮಾನವ ಕುಲದ ಕಲ್ಯಾಣಕ್ಕಾಗಿ, ಸಮತೆ-ಸ್ವಾತಂತ್ರ್ಯ-ಸಹೋದರತ್ವ-ಮಾನವೀಯತೆಯ ತಳಹದಿಯ ಮೇಲೆ, ಅರಿವು-ಆಚಾರ-ಅನುಭಾವದ ಸೈದ್ಧಾಂತಿಕ ನೆಲಗಟ್ಟಿನ ಮೇಲೆ ಅಂದಿನ ಕಲ್ಯಾಣದಲ್ಲಿ ಇಷ್ಟಲಿಂಗ ಪರಂಪರೆಯ ವಿನೂತನವಾದ '**ಲಿಂಗಾಯತ ಧರ್ಮ**'ವನ್ನು ಸ್ಥಾಪಿಸಿದರು.

ಲಿಂಗಾಯತ ಧರ್ಮವು ಜಾತಿ ರಹಿತ ಹಾಗೂ ಧರ್ಮ ಸಹಿತವಾದ ಬಸವ ಧರ್ಮವಾಗಿದ್ದು, ದಯವೇ ಈ ಧರ್ಮದ ಮೂಲವಾಗಿದೆ. ಲಿಂಗಾಯತ ಧರ್ಮವು ಪ್ರಗತಿಪರ ಧರ್ಮವಾಗಿದ್ದು, ಇದು ಮೂಢ ಸಂಪ್ರದಾಯ-ಕಂದಾಚಾರಗಳನ್ನು ತಿರಸ್ಕರಿಸಿದೆ. ಈ ಧರ್ಮಕ್ಕೆ ವೇದ-ಆಗಮ-ಉಪನಿಷತ್ತು ಶಾಸ್ತ್ರ-ಪುರಾಣಗಳು ಆಧಾರವಲ್ಲ, ಲಿಂಗಾನುಭಾವಿಯ ಸ್ವಾನುಭಾವವೇ ಆಧಾರವಾಗಿದೆ. **ಬಸವಾದಿ ಶರಣರ ಸ್ವಾನುಭಾವದ ವಚನಗಳೇ ಧರ್ಮಗ್ರಂಥ.**

ಬಸವ ಪ್ರಣೀತ ಲಿಂಗಾಯತ ಧರ್ಮದಲ್ಲಿ ಬ್ರಾಹ್ಮಣ-ಶೂದ್ರರೆಂಬ ವರ್ಣಭೇದವಿಲ್ಲ, ಗೃಹಸ್ಥ-ಸನ್ಯಾಸಿಯೆಂಬ ಆಶ್ರಮಭೇದವಿಲ್ಲ, ಬಡವ-ಬಲ್ಲಿದರೆಂಬ ವರ್ಗಭೇದವಿಲ್ಲ, ಸ್ತ್ರೀ-ಪುರುಷರೆಂಬ ಲಿಂಗಭೇದವಿಲ್ಲ, ಸ್ಪೃಶ್ಯ-ಅಸ್ಪೃಶ್ಯರೆಂಬ ಮನೋರೋಗವಿಲ್ಲ. ವಿಪ್ರಮೊದಲು ಅಂತ್ಯಜ ಕಡೆಯಾಗಿ ಅಂಗದ ಮೇಲೆ ಇಷ್ಟಲಿಂಗ ಸಂಸ್ಕಾರ ಪಡೆದವರೆಲ್ಲ ಸಮಾನರು ಎಂಬ ಧಾರ್ಮಿಕ-ಸಾಮಾಜಿಕ ಸಮಾನತೆಯಿದೆ.

ಗುರುಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರ ಎಂಬ ಅಷ್ಟಾವರಣಗಳು ಅಂಗವಾಗಿ, ಲಿಂಗಾಚಾರ, ಸದಾಚಾರ, ಶಿವಾಚಾರ, ಗಣಾಚಾರ, ಭೃತ್ಯಾಚಾರವೆಂಬ ಪಂಚಾಚಾರಗಳು ಪ್ರಾಣವಾಗಿ, ಭಕ್ತ, ಮಹೇಶ ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಷಟ್‌ಸ್ಥಲವೇ ಆತ್ಮವಾಗಿ, ಏಕದೇವೋಪಾಸನೆಯ ವ್ಯವಸ್ಥೆ, ಲಿಂಗಾಂಗ ಸಾಮರಸ್ಯದ ಧ್ಯೇಯವುಳ್ಳ ಸಹಜ-ಸರಳ-ಸುಂದರ ಧರ್ಮವೇ ಲಿಂಗಾಯತ ಧರ್ಮವಾಗಿದೆ.

ಸತ್ಯಶುದ್ಧ ಕಾಯಕ, ನಿತ್ಯಲಿಂಗಾರ್ಚನೆ, ಭಕ್ತಿ ದಾಸೋಹ, ಪ್ರಸಾದ ಸಂತೃಪ್ತಿಯ ಶರಣ ಜೀವನ ಈ ಧರ್ಮದ ಆದರ್ಶವಾಗಿದೆ. **ದೇವ ಭಕ್ತರ ನಡುವಿನ ಅಡ್ಡಗೋಡೆಗಳಂತಿರುವ ಪೂಜಾರಿ-ಪುರೋಹಿತ ವರ್ಗವನ್ನು ದೂರೀಕರಿಸಿ,** ಅಹಂಗ್ರಹೋಪಾಸನೆಯ ಇಷ್ಟಲಿಂಗಾರ್ಚನೆಯ ಧರ್ಮವಾಗಿದೆ. ಚೆನ್ನಬಸವಣ್ಣನವರು ಹೇಳುವಂತೆ-

ಬಸವನೇ ಬಿಲ್ಲಾಳಾಗಿ
ಹೊಸಭಕ್ತಿ ಅಂಬಾಗಿ
ಎಸೆದನಯ್ಯಾ ಆ ಲಿಂಗವನು ಗುರಿ ಮಾಡಿ
ಶಿಸು ಬಾಣವಕೊಂಡು ಬಸುರ ಮಧ್ಯೆ ತಾಗೆ
ಹೊಸದೆಸೆಗಳೆಲ್ಲ ಕಾಣಬಂದವಯ್ಯಾ!
ಭಸ್ಮದೆಣ್ಣೆಯ ಹೂಸಿ
ಕೂಡಲಚೆನ್ನಸಂಗಯ್ಯನಲ್ಲಿ
ಬಸವಪೂಯದ ಬಂದು ಆರೈದ ಲಿಂಗವನು

ಬಸವಗುರುವಿನಿಂದ ಲಿಂಗಾಯತ ಧರ್ಮ-ಸಮಾಜ-ಸಾಹಿತ್ಯ-ಸಂಸ್ಕೃತಿಯು ಹೊಸದಾಗಿ ಆವಿರ್ಭವಿಸಿತು.

**೨. ಅನುಭವ ಮಂಟಪ-೭೭೦ ಅಮರಗಣಂಗಳು :**

ಅರಿವಿನ ತೃಪ್ತಿಗೆ
ಅನುಭಾವವೇ ಆಶ್ರಯ.
ಲಿಂಗಾನುಭಾವದಿಂದ
ನಿಮ್ಮ ಕಂಡು ಎನ್ನ ಮರೆದೆ
ಕೂಡಲಸಂಗಮದೇವಾ.

ಅರಿವಿನ ತೃಪ್ತಿಗೆ ಅನುಭಾವವೇ ಆಶ್ರಯವಾಗಿರುವುದರಿಂದ ಅನುಭವಗಳ ಚಿಂತನ-ಮಂಥನ-ಕಾರ್ಯಾಚರಣೆ-ವ್ಯಷ್ಟಿ-ಸಮಷ್ಟಿಯ ಕಲ್ಯಾಣಕ್ಕಾಗಿ ಧರ್ಮಪಿತ ಬಸವಣ್ಣನವರು '**ಅನುಭವ ಮಂಟಪ**'ವೆಂಬ ವಿಶ್ವವಿನೂತನವಾದ, ಪ್ರಪಂಚದ ಪ್ರಪ್ರಥಮ ಸಮಾಜೋ-ಧಾರ್ಮಿಕ ಸಂಸ್ಥೆಯೊಂದನ್ನು ಸ್ಥಾಪಿಸಿದರು. ಈ ಸಂಸ್ಥೆಯ ಮೂಲಕ ಬಸವಣ್ಣನವರು ಅದ್ಭುತವಾದ ಸಮಾಜೋ ಧಾರ್ಮಿಕ ಪರಿವರ್ತನೆಯನ್ನೇ ತಂದರು.

ಧರ್ಮಗುರು ಬಸವಣ್ಣನವರ ಪುಣ್ಯಾಂಗನೆ **ಶರಣೆ ನೀಲಾಂಬಿಕ** ತಾಯಿಯವರು ತಮ್ಮದೊಂದು ವಚನದಲ್ಲಿ ಈ ಸಾಧನೆಯನ್ನು ಈ ರೀತಿ ವಿವರಿಸಿರುವುದು ತಿಳಿದು ಬರುತ್ತದೆ-

ಪ್ರಣವದ ಬೀಜವ ಬಿತ್ತಿ
ಪಂಚಾಕ್ಷರಿಯ ಬೆಳೆಯ ಬೆಳೆದು
ಪರಮ ಪ್ರಸಾದವನೊಂದು ರೂಪ ಮಾಡಿ ಮೆರೆದು
ಭಕ್ತಿ ಫಲವನುಂಡಾತ ನಮ್ಮ ಬಸವಯ್ಯನು.
ಚೆನ್ನಬಸವನೆಂಬ ಪ್ರಸಾದಿಯ ಪಡೆದು
ಅನುಭವ ಮಂಟಪವನನುವು ಮಾಡಿ
ಅನುಭಾವ ಮೂರ್ತಿಯಾದ ನಮ್ಮ ಬಸವಯ್ಯನು.
ಅರಿವ ಸಂಪಾದಿಸಿ ಆಚಾರವನಂಗಗೊಳಿಸಿ
ಏಳುನೂರೆಪ್ಪತ್ತು ಅಮರಗಣಂಗಳ
ಅನುಭವ ಮೂರ್ತಿಗಳ ಮಾಡಿದಾತ
ನಮ್ಮ ಬಸವಯ್ಯನು...
ಸಂಗಯ್ಯನಲ್ಲಿ ಸ್ವಯಲಿಂಗಿಯಾದ
ನಮ್ಮ ಬಸವಯ್ಯನು.

ಬಸವಗುರು ಸ್ಥಾಪಿಸಿದ ಲಿಂಗಾಯತಧರ್ಮ-ಅನುಭವಮಂಟಪ ಇವುಗಳ ಕೀರ್ತಿ- ವಾರ್ತೆಯು ನಾಡಿನೆಲ್ಲೆಡೆಯಲ್ಲಿ ಹಬ್ಬಿದಾಗ ಕಾಶ್ಮೀರದಿಂದ- ಕನ್ಯಾಕುಮಾರಿ ವರೆಗಿನ ಶರಣ-ಶರಣೆಯರೆಲ್ಲ ಕಲ್ಯಾಣಕ್ಕೆ ಆಗಮಿಸಿದರು. ತಮ್ಮ ತಮ್ಮ ಶಕ್ತಿ- ಸಾಮರ್ಥ್ಯ- ಒಲವಿಗನುಸಾರವಾದ **'ಕಾಯಕ'** ಕೈಕೊಂಡು ಸ್ವಾವಲಂಬನೆಯ ಸ್ವಾಭಿಮಾನದ ಶರಣಜೀವನ ಪ್ರಾರಂಭಿಸಿದರು. ಅರಿವು-ಆಚಾರ-ಅನುಭಾವವನು ಅಂಗವಿಸಿಕೊಂಡು ಅಮರಗಣಂಗಳೆನಿಸಿದರು. **ಶರಣ ಅಲ್ಲಮಪ್ರಭುದೇವರು** ತಮ್ಮ ವಚನದಲ್ಲಿ ಹೀಗೆ ವರ್ಣಿಸಿದ್ದಾರೆ-

ಕಲ್ಯಾಣವೆಂಬ ಪ್ರಣತಿಯಲ್ಲಿ
ಭಕ್ತಿರಸವೆಂಬ ತೈಲವನೆರೆದು
ಆಚಾರವೆಂಬ ಬತ್ತಿಯಲ್ಲಿ
ಬಸವಣ್ಣನೆಂಬ ಜ್ಯೋತಿಯ ಮುಟ್ಟಿಸಲು

ತೊಳಗಿ ಬೆಳಗುತಿರ್ದಿತಯ್ಯಾ ಶಿವನ ಪ್ರಕಾಶ!
ಆ ಬೆಳಗಿನೊಳಗೊಪ್ಪುತ್ತಿರ್ದರಯ್ಯಾ
ಅಸಂಖ್ಯಾತ ಭಕ್ತ ಮಹಾಗಣಂಗಳು!
ಶಿವಭಕ್ತರಿರ್ದ ಕ್ಷೇತ್ರವು
ಅವಿಮುಕ್ತ ಕ್ಷೇತ್ರವೆಂಬುದು ಹುಸಿಯೆ?
ಶಿವಭಕ್ತರಿರ್ದ ದೇಶವು
ಪಾವನವೆಂಬುದು ಹುಸಿಯೇ?
ಗುಹೇಶ್ವರಲಿಂಗದಲ್ಲಿ
ಎನ್ನ ಪರಮಾರಾಧ್ಯ ಸಂಗನಬಸವಣ್ಣನ
ಕಂಡು ಬದುಕಿದೆ ಕಾಣಾ.

ಕಲ್ಯಾಣದ ಅನುಭವಮಂಟಪಕ್ಕೆ ಬಂದು ಶರಣರಾದವರಲ್ಲಿ ಆದ್ಯರು, ವೇದ್ಯರು, ಸಾಧ್ಯರು ಎಂದೆನಿಸಿದ ಬಸವಣ್ಣನವರ ಸಮಕಾಲೀನ ಹಿರಿಯ ಶರಣ ಮಾದಾರ ಚೆನ್ನಯ್ಯ, ಡೋಹರ ಕಕ್ಕಯ್ಯ, ಸಮಗಾರ ಹರಳಯ್ಯ, ಹೊಲೆಯರ ಶಿವನಾಗಮಯ್ಯ, ಜೇಡರ ದಾಸಿಮಯ್ಯ, ಅಂಬಿಗರ ಚೌಡಯ್ಯ, ಮಡಿವಾಳ ಮಾಚಯ್ಯ, ಮೋಳಿಗೆಯ ಮಾರಯ್ಯ, ಬಹುರೂಪಿ ಚೌಡಯ್ಯ, ಹಡಪದ ಅಪ್ಪಣ್ಣ, ಸುಜ್ಞಾನಿ ಚೆನ್ನಬಸವಣ್ಣ, ಕಾಯಕಯೋಗಿ ಸಿದ್ಧರಾಮೇಶ್ವರ, ವೈರಾಗ್ಯವಿಭು ಅಲ್ಲಮಪ್ರಭು, ಮರುಳ ಶಂಕರದೇವ, ಬಾಚಿಕಾಯಕದ ಬಸವಪ್ಪ, ಆಯ್ದಕ್ಕಿ ಮಾರಯ್ಯ, ನುಲಿಯ ಚಂದಯ್ಯ, ಕುರುಬಗೊಲ್ಲಾಳ, ಅಮುಗೆದೇವಯ್ಯ, ತುರುಗಾಹಿರಾಣ್ಣ, ಸೊಡ್ಡಳ ಬಾಚರಸರು, ಉರಿಲಿಂಗಿದೇವ, ಉರಿಲಿಂಗಿಪೆದ್ದಣ್ಣ, ಎಚ್ಚರಿಕೆ ಕಾಯಕದ ಮುತ್ತಣ್ಣ, ಹಾವಿನಾಳ ಕಲ್ಲಯ್ಯ, ಮೇದಾರ ಕೇತಯ್ಯ, ಶಂಕರ ದಾಸಿಮಯ್ಯ, ಕಿನ್ನರಿ ಬ್ರಹ್ಮಯ್ಯ, ವೈದ್ಯ ಸಂಗಣ್ಣ, ಢಕ್ಕೆಯ ಬೊಮ್ಮಣ್ಣ, ಸಕಲೇಶ ಮಾದರಸ, ಕುಂಬಾರ ಗುಂಡಯ್ಯ, ಒಕ್ಕಲಿಗ ಮುದ್ದಣ್ಣ, ವಚನ ಭಂಡಾರಿ ಶಾಂತರಸ ಮುಂತಾದವರು ಪ್ರಮುಖರಾಗಿದ್ದಾರೆ.

ಶರಣೆಯರಾದವರಲ್ಲಿ - ಅಕ್ಕನಾಗಮ್ಮ ಗಂಗಾಂಬಿಕೆ, ನೀಲಾಂಬಿಕೆ, ದುಗ್ಗಳೆ, ದಾನಮ್ಮ ಲಿಂಗಮ್ಮ ಲಕ್ಕಮ್ಮ ಸತ್ಯಕ್ಕ ಮುಕ್ತಾಯಕ್ಕ ಅಕ್ಕಮಹಾದೇವಿ, ಮೋಳಿಗೆಯ ಮಹಾದೇವಮ್ಮ ರಾಯಮ್ಮ ಅಕ್ಕಮ್ಮ ಕಲ್ಯಾಣಮ್ಮ ಬೊಂತಾದೇವಿ, ಸಂಕವ್ವೆ ಮುಂತಾದವರು ಪ್ರಮುಖರಾಗಿದ್ದಾರೆ.

### ೩. ಶೂನ್ಯ ಸಿಂಹಾಸನ-ಪೀಠ ಪರಂಪರೆ :

ಅಷ್ಟಾವರಣದ ಅರಿವು, ಪಂಚಾಚಾರದ ಆಚರಣೆ, ಷಟ್‌ಸ್ಥಲದ ಅನುಭಾವದ 'ತತ್ವಜ್ಞಾನ, ಸಿದ್ಧಾಂತ, ದರ್ಶನ'ದ ಚಿಂತನ ಮತ್ತು ಪ್ರಸಾರಕ್ಕಾಗಿ ಧರ್ಮಪಿತ ಬಸವಣ್ಣನವರು ತಮ್ಮ ಸ್ವಾನುಭಾವದ ನಿಲವಿನಿಂದ 'ಶೂನ್ಯ ಸಿಂಹಾಸನ' ವನ್ನು ಕಲ್ಯಾಣದ ಅನುಭವಮಂಟಪದಲ್ಲಿ ರಚಿಸಿದರು.

ಈ ಶೂನ್ಯ ಸಿಂಹಾಸನದ ಅಧ್ಯಕ್ಷರಾಗಿ ಅಲ್ಲಮಪ್ರಭುದೇವ, ಚೆನ್ನಬಸವಣ್ಣ, ಸಿದ್ಧರಾಮೇಶ್ವರರು ಅನುಭವ ಮಂಟಪದ ಕಾರ್ಯಕಲಾಪಗಳನ್ನು ಸಾಂಗವಾಗಿ ಮುನ್ನಡೆಸಿಕೊಂಡು ಬಂದರು.

'ಕೂಡಲಸಂಗನ ರಾಜ್ಯವ ಹಂಚಿಕೊಳ್ಳಿ ನಿಮುನಿಮಗೆಲ್ಲಾ' ಎಂಬ ಮರ್ತ್ಯಲೋಕವೆಂಬ ಕರ್ತಾರನ ಕಮ್ಮಟದಲ್ಲಿ ಸರ್ವರಿಗೂ ಸರ್ವರಂಗಗಳಲ್ಲಿ ಸಮತೆಯನ್ನು ಸಾರಿದ್ದರ ಪರಿಣಾಮವಾಗಿ, ಪಟ್ಟಭದ್ರ ಹಿತಾಸಕ್ತಿಗಳು ಪಿತೂರಿ ನಡೆಸಿ **ಕಲ್ಯಾಣಕ್ರಾಂತಿ** ಜರಗುವಂತೆ ಮಾಡಿದ ಕಾರಣ, ಬಸವಾದಿ ಶರಣರಲ್ಲಿ ಅನೇಕರು ಬಲಿದಾನವಾದರು. ಉಳಿದವರು ಪ್ರಶಾಂತ ತಾಣಗಳನ್ನು ಅರಸಿಕೊಂಡು ಹೋಗಿ ಅಲ್ಲಲ್ಲಿ ಮಹಾಬಯಲಿನಲ್ಲಿ ಬಯಲಾದರು. ಮಾನವಕಲ್ಯಾಣದ ಒಂದು ಮಹಾನ್ ಕ್ರಾಂತಿಯು ಇತಿಹಾಸದ ಪುಟಗಳಲ್ಲಿ ಸೇರಿತು.

### ೪. ಮಠಗಳ ಪರಂಪರೆ :

ಹನ್ನೆರಡನೆಯ ಶತಮಾನದಲ್ಲಿ ಚಾತುರ್‌ವರ್ಣ ಧರ್ಮ-ಸಮಾಜ ವ್ಯವಸ್ಥೆಯನ್ನು, ಪೂಜಾರಿ-ಪುರೋಹಿತರ ಧಾರ್ಮಿಕ ಶೋಷಣೆಯನ್ನು, ಕರ್ಮಠ ಮೂಢನಂಬಿಕೆಗಳನ್ನು ನಿರಾಕರಿಸಿ ವಿಪ್ರ-ಅಂತ್ಯಜವೆಂಬ ವರ್ಣಭೇದವಿಲ್ಲದ, ಗೃಹಸ್ಥ-ಸನ್ಯಾಸಿ ಎಂಬ ಆಶ್ರಮಭೇದವಿಲ್ಲದ, ಬಡವ-ಬಲ್ಲಿದರೆಂಬ ವರ್ಗಭೇದವಿಲ್ಲದ, ಸ್ತ್ರೀ-ಪುರುಷರೆಂಬ ಲಿಂಗಭೇದವಿಲ್ಲದ, ನೂರೆಂಟು ಕುಲ-ಜಾತಿ-ಮತ-ಪಂಥಗಳ ಗೊಂದಲವಿಲ್ಲದ ಸಮತೆ-ಸ್ವಾತಂತ್ರ್ಯ-ಬಂಧುತ್ವಗಳ ತಳಹದಿಯ ಮೇಲಿರ್ದ ವಿನೂತನವಾದ ಇಷ್ಟಲಿಂಗ ಪರಂಪರೆಯ ಲಿಂಗಾಯತ ಧರ್ಮ-ಸಮಾಜ-ಸಂಸ್ಕೃತಿಗಳು, ಕಲ್ಯಾಣ ಕ್ರಾಂತಿಯ ತರುವಾಯ ಶೈವ-ವೈದಿಕ ಕರ್ಮಠ ಪುರೋಹಿತ-ಶಾಹಿಯ ಕುತಂತ್ರಕ್ಕೆ ಬಲಿಯಾಗಿ ಹೋದವು.

೧೨ನೇ ಶತಮಾನದಿಂದ ೧೫ನೇ ಶತಮಾನದವರೆಗೆ ಲಿಂಗವಂತ ಧರ್ಮವು

ತನ್ನ ಅಸ್ತಿತ್ವವನ್ನೇ ಕಳೆದುಕೊಳ್ಳತೊಡಗಿತ್ತು. ಆಗ **ಯಡೆಯೂರ ತೋಂಟದ ಸಿದ್ಧಲಿಂಗ ಶಿವಯೋಗಿಗಳ** ನೇತೃತ್ವದಲ್ಲಿ ಬಸವಾದಿ ಶರಣರ ಧರ್ಮ-ಸಂಸ್ಕೃತಿಯ ಪುನರುತ್ಥಾನಕ್ಕಾಗಿ ನೂರೊಂದು ವಿರಕ್ತರು, ಏಳುನೂರೊಂದು ವಿರಕ್ತರು ಇಡೀ ನಾಡನ್ನೆಲ್ಲ ಸಂಚರಿಸುತ್ತಾ, **ಮಠ-ಪೀಠಗಳ ಉಗಮಕ್ಕೆ** ಕಾರಣರಾದರು. ಈ ಪರಂಪರೆಯು ತಾತ್ವಿಕವಾಗಿ ೧೨ನೇ ಶತಮಾನದ ಬಸವಣ್ಣನವರು ಸ್ಥಾಪಿಸಿದ ಅನುಭವ ಮಂಟಪದ ಶೂನ್ಯ ಸಿಂಹಾಸನದ ಅಧ್ಯಕ್ಷ ಅಲ್ಲಮಪ್ರಭುವಿನಿಂದ ತಮ್ಮ ಮೂಲವೆಂದು ಹೇಳಿಕೊಂಡು ಬಂದಿದೆ.

"ಶ್ರೀ ಗುರು ಬಸವ ಲಿಂಗಾಯ ನಮಃ ಶ್ರೀ ಮನ್ಮಹಾಶೂನ್ಯ ಸಿಂಹಾಸನಾಧೀಶ್ವರ ಜಗದ್ಗುರುಗಳಾದ ಅಲ್ಲಮ ಪ್ರಭು, ಚೆನ್ನಬಸವರಾಜೇಂದ್ರ ಸ್ವಾಮಿಗಳವರ ಶಿಷ್ಯ ಪರಂಪರೆ ವಂಶರತ್ನಾಕರ ಪ್ರಭುವಂಶೋದ್ಭವರಾದ ಗುರುಗಳ ವಿವರವು" ಎಂದು 'ನಿರಂಜನ ವಂಶ ರತ್ನಾಕರ' ಕೃತಿಯಲ್ಲಿ ವಿವರಿಸಲ್ಪಟ್ಟಿದೆ.

ಕಾಲಗತಿಸಿದಂತೆ ಲಿಂಗಾಯತ **'ಅನುಭವ ಮಂಟಪ'** ಪರಂಪರೆಯು ಲಿಂಗಾಯತ-ವೀರಶೈವಮಠ-ಪೀಠಗಳಾಗಿ ಬದಲಾವಣೆಗೊಂಡು, ಗುರುವರ್ಗ-ವಿರಕ್ತವರ್ಗ ಎಂದು ವಿಭಜಿತಗೊಂಡು ಐದು ಗುರುವರ್ಗದ ಹಾಗೂ ಐದು ವಿರಕ್ತವರ್ಗದ ಮಠ-ಪೀಠಗಳು ಪ್ರಾರಂಭಗೊಂಡವು. ಚೀಲಾಳ, ಕುಮಾರ, ಮುರಗಾ, ಕೆಂಪಿನ, ಶೀಲ ಸಮಯುಗಳೆಂದು ಕರೆದುಕೊಂಡು ವಿರಕ್ತ ಪರಂಪರೆ ಮುಂದುವರೆಯಿತು. ಇವುಗಳ ಅಡಿಯಲ್ಲಿ ನಾಡಿನಾದ್ಯಂತ ಗ್ರಾಮ-ಪಟ್ಟಣಗಳಲ್ಲಿ ಸಾವಿರಾರು ಮಠಗಳ ರಚನೆಗೆ- ಸೃಷ್ಟಿಗೆ ಪ್ರಾರಂಭವಾಯಿತು.

### ೫. ಚಿತ್ತರಗಿ ಪೀಠ : ಪಟ್ಟಗಳು-ಪರಂಪರೆ :

ಬಸವ ಪರಂಪರೆಯ ಅನುಭವ ಮಂಟಪದ ಶೂನ್ಯ ಸಿಂಹಾಸನ ಶೂನ್ಯ ಪೀಠದ ಪರಂಪರೆಯು ಅಲ್ಲಮಪ್ರಭು, ಚೆನ್ನಬಸವಣ್ಣ, ಸಿದ್ಧರಾಮರ ನಂತರ ಹದಿನೈದನೆಯ ಶತಮಾನದವರೆಗೆ ಅಜ್ಞಾತವಾಗಿಯೇ ಉಳಿದಿದೆ. ಕಲ್ಯಾಣದ ನಿರಂಜನ ಜಂಗಮವಿಭು ಅಲ್ಲಮಪ್ರಭುದೇವರು ಬಸವತತ್ವ ಪ್ರಸಾರಾರ್ಥವಾಗಿ ಅನುಭವ ಮಂಟಪದಿಂದ ಚರಜಂಗಮವಾಗಿ ಸಂಚರಿಸುತ್ತಾ ಚಿತ್ತರಗಿಗೆ ಬಂದು ಅಲ್ಲಿ ಕೆಲ ಕಾಲವಿದ್ದು, ಶಿವಾನುಭವ ನಡೆಸಿ, ಚಿತ್ತರಗಿಯಿಂದ ಮುಂದೆ ಬಿಜಯಂಗೈಯ-ಬೇಕಾಗಿ ಬಂದಾಗ, ಸದ್ಭಕ್ತರ ಅಪೇಕ್ಷೆಯಂತೆ ತಮ್ಮ ಚರಜಂಗಮ ಅನುಯಾಯಿ-ಗಳಲ್ಲೊಬ್ಬರಾದ **"ವಿಜಯ ಮಹಾಂತ ಶರಣ"**ರನ್ನು ಅಲ್ಲಿಯೇ ಉಳಿಸಿ ಹೋದರು.

ಅವರಿಂದಲೇ ಚಿತ್ತರಗಿ ಪೀಠ ಪರಂಪರೆಯು ಪ್ರಾರಂಭವಾಯಿತೆಂದು ಹೇಳಲಾಗುತ್ತಿದೆ. ಆದ್ದರಿಂದಲೇ ಇದು '**ಶರಣಸ್ಥಲ ಪೀಠ**'ವಾಗಿದೆ. ಚಿತ್ತರಗಿ ಪೀಠದ ಹಿರಿಮೆಯನ್ನು ಉಗ್ಘಡಿಸುವಾಗ- "**ಶ್ರೀಮತ್ ಸಚ್ಚಿದಾನಂದ ನಿತ್ಯ ಪರಿಪೂರ್ಣ ಅವಿರಳ ಪರಂಜ್ಯೋತಿ ಸ್ವರೂಪಿಗಳಾದ ಶ್ರೀಮದ್ ಅಲ್ಲಮಪ್ರಭುವಿನ ಸಾಂಪ್ರದಾಯಕ-ರಾದಂತಹ ಚಿತ್ತರಗಿ ಶಿವಾನುಭವ ಚರವರ್ಯ ಶ್ರೀ ವಿಜಯ ಮಹಾಂತ ಸ್ವಾಮಿಗಳು**" ಎಂಬ ಒಕ್ಕಣೆ ಇರುವುದು ತಿಳಿದು ಬರುತ್ತದೆ.

ಹನ್ನೆರಡನೆಯ ಶತಮಾನದ ತರುವಾಯ ಅಂದಾಜು ಮೂನ್ನೂರು ವರುಷಗಳ ನಂತರ ೧೫ನೇ ಶತಮಾನದ ವಿಜಯನಗರ ಸಾಮ್ರಾಜ್ಯದ **ಪ್ರೌಢದೇವರಾಯನ ಕಾಲವು** ಲಿಂಗಾಯತ ಧರ್ಮೇತಿಹಾಸದ ಪುನರುಜ್ಜೀವನ ಯುಗವೆಂದು ಪ್ರಸಿದ್ಧಿ ಪಡೆದಿದೆ. ಈ ಕಾಲದಲ್ಲಿ ನೂರೊಂದು ವಿರಕ್ತರು ಸಂಘಟಿತರಾಗಿ ಬಸವಪ್ರಣೀತ ಲಿಂಗವಂತ ಧರ್ಮ-ಸಂಸ್ಕೃತಿ-ಬಸವತತ್ವ ಪ್ರಸಾರದ ಮಹಾಮಣಿಹ ಪೂರೈಸಲೋಸುಗ ಶ್ರಮಿಸಿದರು. ಅದೇ ಕಾಲಕ್ಕೆ **ತೋಂಟದ ಸಿದ್ಧಲಿಂಗ ಶಿವಯೋಗಿಗಳು** ಚರಜಂಗಮವಾಗಿ ತಮ್ಮ ೭೦೧ ವಿರಕ್ತರೊಂದಿಗೆ ನಾಡನ್ನೆಲ್ಲ ಸುತ್ತಿ, ಬಸವ ಪರಂಪರೆಯ ಮಠ-ಪೀಠಗಳನ್ನು ಹುಟ್ಟುಹಾಕಿದರು. ಅವರ ಶಿಷ್ಯ ಪರಂಪರೆಯ '**ಚೀಲಾಳ ಸಮಯ**'ಕ್ಕೆ ಚಿತ್ತರಗಿ ಪೀಠವು ಸೇರಿದ್ದಾಗಿದೆಯೆಂದು ವಿದ್ವಾಂಸರ, ಸಂಶೋಧಕರ ಅಭಿಪ್ರಾಯವಾಗಿದೆ.

ಚಿತ್ತರಗಿ ಸಂಸ್ಥಾನಮಠ ಇಳಕಲ್ಲ ಶ್ರೀಮಠವು ಬಸವತತ್ವ ಪ್ರಸಾರದ ಮುಖ್ಯ ಕೇಂದ್ರ ಮಠವಾಗಿ ಬೆಳೆದುಬಂದಿರುವುದನ್ನು ಕಾಣುತ್ತೇವೆ. ತೋಂಟದ ಸಿದ್ಧಲಿಂಗ ಶಿವಯೋಗಿಗಳ ಶಿಷ್ಯರಲ್ಲೊಬ್ಬರಾದ **ಶ್ರೀ ವಿಜಯ ಮಹಾಂತ ಸ್ವಾಮಿಗಳು** ಮೂಲ ಗುರುಗಳಾಗಿದ್ದು ಅಂದಿನಿಂದ ಚಿತ್ತರಗಿ ಪೀಠ ಪರಂಪರೆಯ ಇತಿಹಾಸ ಹಾಗೂ ಪೀಠಾಧಿಪತಿಗಳ ವಿವರವು ನಮಗೆ (೧೫ನೇ ಶತಮಾನದಿಂದ) ಇಂದಿನವರೆಗೆ ಲಭ್ಯವಿದೆ.

ಚಿತ್ತರಗಿ ಪೀಠದ ಪೀಠಾಧಿಪತಿಗಳ ಕುರಿತು ಕೆಳಗಿನಂತೆ ಅಧಿಕೃತವಾಗಿ ಬರಹ ಬಳಸಲಾಗುತ್ತಾ ಬರಲಾಗಿದೆ.-

**"ಶ್ರೀಮತ್ ಸಚ್ಚಿದಾನಂದ ನಿತ್ಯ ಪರಿಪೂರ್ಣ ಅವಿರಳ ಪರಂಜ್ಯೋತಿ ಸ್ವರೂಪಿ ಗಳಾದ ಶ್ರೀಮದ್ ಅಲ್ಲಮ ಪ್ರಭುವಿನ ಸಾಂಪ್ರದಾಯಕರಾದಂಥ ಚಿತ್ತರಗಿ ಶಿವಾನುಭವ ಚರವರ್ಯ ಚರಮೂರ್ತಿ ಶ್ರೀ ಶ್ರೀ ಶ್ರೀ ವಿಜಯ ಮಹಾಂತ ಸ್ವಾಮಿಗಳು"**

ಚಿತ್ತರಗಿ ಸಂಸ್ಥಾನ ಮಠಗಳ ಪರಂಪರೆಯ ಹಿರಿಮೆ-ಗರಿಮೆ ಉಗ್ಘಡಿಸುವಾಗ ಕೆಳಗಿನಂತೆ ಘೋಷಣೆ ಮಾಡಲಾಗುತ್ತದೆ-

**"ಶ್ರೀಮನ್ನಿರಾಭಾರಿ ದೇಶಿಕ ವರೇಣ್ಯಾನಾಂ ಪಿಂಡಾದಿಜ್ಞಾನ ಶೂನ್ಯಾಂತಮಾದ ಏಕೋತ್ತರ ಷಟ್‌ಸ್ಥಲ ಸ್ಥಾಪನಾಚಾರ್ಯ ಚಿನ್ಮೂಲಾದ್ರಿವಾಸ ಚಿತ್ತಸಿಂಹಾಸನಾಧಿಕಾರಿಗಳಾದ ಚಿತ್ತರಗಿ ಶಿವಾನುಭವ ಚರಾಧ್ಯಕ್ಷರಾದಂಥ ಶ್ರೀ ಶ್ರೀ ಶ್ರೀ ವಿಜಯ ಮಹಾಂತ ಸ್ವಾಮಿಗಳು."**

ಹಳ್ಳಿಯ ಮುಗ್ಧ ಭಕ್ತಿಯ ಜನರು ತಮ್ಮ ಪೀಠದ ಸ್ವಾಮಿಗಳ ಬಗ್ಗೆ ಸ್ವಾಭಿಮಾನದಿಂದ ಉದ್‌ಘೋಷಿಸುವ ಮಾತು ಹೀಗಿದೆ-

**"ಚಿತ್ತರಗಿ ದೊರೆಯೆ ನಿನಗಾರು ಸರಿಯೆ ? ಸರಿ ಎಂಬುವರ ಕೈ ಕಾಲು ಮುರಿಯೆ!"**

ಚಿತ್ತರಗಿ ಶ್ರೀ ವಿಜಯಮಹಾಂತೇಶ್ವರ ಸಂಸ್ಥಾನಮಠ ಇಳಕಲ್ಲದ ಪಟ್ಟಾಧಿಕಾರ ಹೊಂದಿದ ಮಠಾಧಿಪತಿಗಳ ವಿವರ ಕೆಳಗಿನಂತಿದೆ :

ಶಿವಾನುಭವ ಚರವರ್ಯರಾದ-

| | | |
|---|---|---|
| ೧. | ಶ್ರೀ ವಿಜಯ ಮಹಾಂತ ಸ್ವಾಮಿಗಳು | (೧೫ನೇ ಶತಮಾನ) |
| ೨. | ಶ್ರೀ ರೇವಣಸಿದ್ಧ ಸ್ವಾಮಿಗಳು | (೧೫ನೇ ಶತಮಾನ) |
| ೩. | ಶ್ರೀ ಶಿವಲಿಂಗ ಸ್ವಾಮಿಗಳು | (೧೬ನೇ ಶತಮಾನ) |
| ೪. | ಶ್ರೀ ಪುಟ್ಟ ಬಸವಲಿಂಗ ಸ್ವಾಮಿಗಳು | (೧೬ನೇ ಶತಮಾನ) |
| ೫. | ಶ್ರೀ ಮುಪ್ಪಿನ ಬಸವಲಿಂಗ ಸ್ವಾಮಿಗಳು | (೧೬ನೇ ಶತಮಾನ) |
| ೬. | ಶ್ರೀ ಚಿಕ್ಕ (ಚೆನ್ನ) ಬಸವಲಿಂಗ ಸ್ವಾಮಿಗಳು | (೧೭ನೇ ಶತಮಾನ) |
| ೭. | ಶ್ರೀ ಕಪ್ಪಿನ ಬಸವಲಿಂಗ ಸ್ವಾಮಿಗಳು | (೧೭ನೇ ಶತಮಾನ) |
| ೮. | ಶ್ರೀ ದಿಗಂಬರ ಚೆನ್ನಬಸವ ಸ್ವಾಮಿಗಳು | (೧೭ನೇ ಶತಮಾನ) |
| ೯. | ಶ್ರೀ ಬಸವಲಿಂಗ ಸ್ವಾಮಿಗಳು | (೧೭ನೇ ಶತಮಾನ) |
| ೧೦. | ಶ್ರೀ ಚೆನ್ನಮಲ್ಲ ಸ್ವಾಮಿಗಳು | (೧೮ನೇ ಶತಮಾನ) |
| ೧೧. | ಶ್ರೀ ಕೆಂಪಿನ ಬಸವಲಿಂಗ ಸ್ವಾಮಿಗಳು | (೧೮ನೇ ಶತಮಾನ) |
| ೧೨. | ಶ್ರೀ ಹಿರಿಯ ಮಹಾಂತ ಸ್ವಾಮಿಗಳು | (೧೮ನೇ ಶತಮಾನ) |
| ೧೩. | ಶ್ರೀ ಮರಿ ಮಹಾಂತ ಸ್ವಾಮಿಗಳು | (೧೯ನೇ ಶತಮಾನ) |

೧೪. ಶ್ರೀ ಮಹಾಂತ ಸ್ವಾಮಿಗಳು (೧೯ನೇ ಶತಮಾನ)
೧೫. ಶ್ರೀ ಗುರುಮಹಾಂತ ಸ್ವಾಮಿಗಳು (೧೮೩೯ - ೧೯೭೫)
೧೬. ಶ್ರೀ ವಿಜಯಮಹಾಂತ ಸ್ವಾಮಿಗಳು (ಪಸಿವಾಳ) (೧೮೭೯ - ೧೯೧೧)
೧೭. ಶ್ರೀ ಗುರುಮಹಾಂತ ಸ್ವಾಮಿಗಳು (ದೋಟಿಹಾಳ) (೧೯೨೮ - ೧೯೩೯)
೧೮. ಶ್ರೀ ಗುರುಮಹಾಂತ ಸ್ವಾಮಿಗಳು (ಜಮಖಂಡಿ) (೧೯೬೩ - ೧೯೭೦)
೧೯. ಶ್ರೀ ಮಹಾಂತ ಸ್ವಾಮಿಗಳು (ಸವದಿ) (೧೯೭೦ ರಿಂದ.....)
(ಸಧ್ಯದ ಹಿರಿಯ ಪೀಠಾಧಿಪತಿಗಳು)
೨೦. ಶ್ರೀ ಗುರುಮಹಾಂತ ಸ್ವಾಮಿಗಳು (ನರಗುಂದ) (೨೦೦೪ ರಿಂದ....)
(ಸಧ್ಯದ ಕಿರಿಯ ಪೀಠಾಧಿಪತಿಗಳು)

ಈ ರೀತಿಯಾಗಿ ಚಿತ್ತರಗಿ ಸಂಸ್ಥಾನಮಠ ಇಳಕಲ್ಲದ ಪೂಜ್ಯ ಮಠಾಧೀಶರ ಹೆಸರುಗಳು ಲಭ್ಯವಿರುತ್ತವೆ. ಆದರೆ ೧ ರಿಂದ ೧೪ ವರೆಗಿನ ಪೂಜ್ಯರ ವಿವರವಾದ ಚಾರಿತ್ರಿಕ ಮಾಹಿತಿಯು ಲಭ್ಯವಿಲ್ಲವಾದ್ದರಿಂದ ೧೫ ರಿಂದ ಸಧ್ಯದ ೧೯ ಹಾಗೂ ೨೦ ನೇಯವರಾಗಿರುವ ಪೂಜ್ಯರ ವರೆಗಿನ ಇತಿಹಾಸವು ಲಭ್ಯವಿದೆ.

## ೬. ಚಿತ್ತರಗಿ ಸಂಸ್ಥಾನಮಠದ ಶಾಖಾಮಠಗಳು :

ಚಿತ್ತರಗಿ ಪೀಠದ ಇಪ್ಪತ್ತು ಪೂಜ್ಯ ಮಠಾಧಿಪತಿಗಳು ಶಿವಾನುಭವ ಚರವರ್ಯರಾಗಿ 'ಬಸವತತ್ವ ಪ್ರಸಾರ'ಕ್ಕಾಗಿ **'ಅಪ್ಪನವರ ವಚನಗಳ ಅನುಭಾವ'** ಮಾಡುತ್ತಾ ಸಂಚರಿಸಿದ ಕಾಲಕ್ಕೆ ಭಕ್ತರು ಶ್ರದ್ಧೆಯಿಂದ ಶಾಖಾಮಠಗಳನ್ನು ಕಟ್ಟಿಸುತ್ತಾ ಬಂದಿದ್ದು ಇಂದು ಶಾಖಾಮಠಗಳ ಸಂಖ್ಯೆಯು ೭೦ರ ವರೆಗೆ ಬೆಳೆದಿರುತ್ತದೆ-

| | | |
|---|---|---|
| ೧. ಚಿತ್ತರಗಿ | ೨. ಇಳಕಲ್ಲ | ೩. ಹುನಗುಂದ |
| ೪. ಇದ್ದಲಗಿ | ೫. ಬೆಳಗಲ್ಲ | ೬. ಬಿಸನಾಳಕೊಪ್ಪ |
| ೭. ಕೂಡಲಸಂಗಮ | ೮. ಹಡಗಲಿ | ೯. ಹುಲಗಿನಾಳ |
| ೧೦. ಸೂಲೀಬಾವಿ | ೧೧. ಕೆಲೂರ | ೧೨. ಚಿತ್ತವಾಡಗಿ |
| ೧೩. ರಾಮವಾಡಗಿ | ೧೪. ಹಿರೇಬಾದವಾಡಗಿ | ೧೫. ಚಿಕ್ಕಬಾದವಾಡಗಿ |
| ೧೬. ವೀರಾಪೂರ | ೧೭. ಕರಡಿ | ೧೮. ಕೋಡಿಹಾಳ |
| ೧೯. ನಾಗರಾಳ | ೨೦. ಆದಾಪೂರ | ೨೧. ಹಿರೇಓತಗೇರಿ |
| ೨೨. ಅಮರಾವತಿ | ೨೩. ಹಿರೇಶಿವನಗುತ್ತಿ | ೨೪. ಚಿಕ್ಕಶಿವನಗುತ್ತಿ |

೨೫. ಚಾಮಲಾಪುರ
೨೬. ವಜ್ಜಲ
೨೭. ಮರೋಳ
೨೮. ಹೆರೂರ
೨೯. ಹಿರೇಕೊಡಗಲಿ
೩೦. ಗೊರಬಾಳ
೩೧. ಲಿಂಗಸ್ಗೂರ
೩೨. ಕರಡಕಲ್ಲ
೩೩. ಎಲಗಲದಿನ್ನೆ
೩೪. ಐದನಾಳ
೩೫. ಕಾಳಾಪುರ
೩೬. ಗುಂದಗೋಳಿ
೩೭. ಆನೆಹೊಸೂರ
೩೮. ಜಾಲಿಬೆಂಚಿ
೩೯. ಕೆಸರಟ್ಟಿ
೪೦. ಅಡವಿಭಾವಿ
೪೧. ಕಾಚಾಪುರ
೪೨. ಬನ್ನಿಗೋಳ
೪೩. ಮುದಗಲ್ಲ
೪೪. ಹುನಕುಂಟಿ
೪೫. ಸಂತೆಕೆಲೂರ
೪೬. ಕಪ್ಪಿಗುಡ್ಡ
೪೭. ಸಂಗಮ
೪೮. ಸರ್ಜಾಪೂರ
೪೯. ಹಲ್ಕಾವಟಗಿ
೫೦. ಇಚನಾಳ
೫೧. ಸಲಗಲದಿನ್ನೆ
೫೨. ತೊಂಡಿಹಾಳ
೫೩. ಹೂಲಗೇರಿ
೫೪. ಕ್ಯಾದಿಗುಪ್ಪಿ
೫೫. ದೋಟಿಹಾಳ
೫೬. ಕೆಸೂರ
೫೭. ಮಾಟೂರ
೫೮. ಜಾಲಿಹಾಳ
೫೯. ಶಿರಗುಪ್ಪಿ
೬೦. ಯಲಬುರ್ಗಾ
೬೧. ಹಿರೇವಂಕಲಕುಂದಿ
೬೨. ಉಪ್ಪಲದಡ್ಡಿ
೬೩. ಈಚಲಕರಂಜಿ
೬೪. ಲಿಂಗಸಗೂರು-ಭಾವಣಿ
೬೫. ಗಂಜಿಹಾಳ
೬೬. ಹೈದ್ರಾಬಾದ
೬೭. ಶಿರೂರ
೬೮. ಮೊಳಕಾಲ್ಮೂರು
೬೯. ಚಿಕ್ಕಮಾಗಿ
೭೦. ಸಿದ್ಧಯ್ಯನಕೋಟೆ

## ೭. ಚಿತ್ತರಗಿ ಪೀಠದ ಮಠಾಧೀಶರು :

ಚಾರಿತ್ರಿಕ ಇತಿಹಾಸವುಳ್ಳ ಚಿತ್ತರಗಿ ಪೀಠದ ಮೊದಲ ಹದಿನಾಲ್ಕು ಜನ ಸ್ವಾಮಿಗಳವರ ಕುರಿತು ವಿವರವಾದ ಮಾಹಿತಿಯು ಲಭ್ಯವಿಲ್ಲ. ೧೫ನೆಯವರಾದ ಪೂಜ್ಯ ಗುರುಮಹಾಂತ ಸ್ವಾಮಿಗಳವರಿಂದ ಪೂಜ್ಯರ ಜೀವನ-ಸಾಧನೆಯ ವಿವರ ತಿಳಿದು ಬರುತ್ತದೆ.

## ಪೂಜ್ಯ ಶ್ರೀ ಗುರು ಮಹಾಂತ ಸ್ವಾಮಿಗಳು : (೧೮೪೯ -೧೮೭೫)

ಚಿತ್ತರಗಿ ಪೀಠದ ೧೫ನೆಯ ಪೀಠಾಧಿಪತಿಗಳಾಗಿದ್ದು, ಮೂವತ್ತಾರು ವರುಷ ಶ್ರೀಮಠದ ಕೀರ್ತಿ ಬೆಳಗಲು ಕಾರಣರಾಗಿದ್ದಾರೆ. ಇವರು ಹೈದರಾಬಾದ ನವಾಬನಿಗೆ ಪುತ್ರ ಸಂತಾನ ಆಶೀರ್ವಾದ ಮಾಡಿದ ರಾಜುಗುರುಗಳಾಗಿದ್ದರು. ಹೈದ್ರಾಬಾದಿನಲ್ಲಿ 'ಮಹಾಂತ ಮಂಜಿಲ್' ಎಂಬ ಬಿಲ್ಡಿಂಗ ಹಾಗೂ ೬೦೦ ಎಕರೆ ಭೂಮಿಯನ್ನು

ನವಾಬನು ಪೂಜ್ಯರಿಗೆ ಅರ್ಪಿಸಿದ್ದನು. ಈಸ್ಟ ಇಂಡಿಯಾ ಕಂಪನಿಯ ಸೇನಾಪತಿ ಬಾಲ್ಮಿನ್ ಸಾಹೇಬನು ಇವರ ಭಕ್ತನಾಗಿದ್ದನು. ಮೆ॥ ಡೆಪ್ಯೂಟಿ ಕಮೀಶನರ ಬುಲಕ್ ಸಾಹೇಬರು ನಿಜಾಂ ಸರಕಾರದ ಪರವಾಗಿ ೧೯-೦೧-೧೮೬೧ ರಂದು ಅರ್ಪಿಸಿದ 'ಚಪರಾಸಿ ಗೌರವ ಬಿಲ್ಲೆ' ಇಂದಿಗೂ ಮಠದಲ್ಲಿದೆ. ಇಳಕಲ್ಲದ ಮುಸ್ಲಿಂ ಸಂತರಾದ ಮುರ್ತುಜಾ ಖಾದ್ರಿ, ಬ್ರಾಹ್ಮಣ ಸಮಾಜದ ಸಂತರಾದ ಹೇರೂರ ಬಾವಾ, ದೇವಾಂಗ ಸಮಾಜದ ಗುರುಗಳಾದ ಶ್ರೀ ರುದ್ರಮುನಿ ಸ್ವಾಮಿಗಳು ಇವರೊಂದಿಗೆ ಆಧ್ಯಾತ್ಮಿಕ ಸ್ನೇಹ ಸಂಬಂಧ ಹೊಂದಿದ್ದರು. ಬಸವ ತತ್ವದ ನಿಜಾಚರಣೆಯು ಇವರಲ್ಲಿ ಕಂಡುಬರುತ್ತದೆ.

## ಶ್ರೀ ವಿಜಯಮಹಾಂತ ಸ್ವಾಮಿಗಳು (ಸಸಿವಾಳ) : (೧೮೭೪-೧೯೧೧)

ಈ ಪೂಜ್ಯರು ಚಿತ್ತರಗಿ ಪೀಠದ ೧೬ನೆಯ **ಪೀಠಾಧಿಪತಿ**ಗಳಾಗಿದ್ದು, ಮಹಾ ತಪಸ್ವಿಗಳೆಂದು ಖ್ಯಾತಿ ಪಡೆದವರು. **ಅಮರಾವತಿಯ ಶ್ರೀ ರಾಮಪ್ಪ ದೇಸಾಯಿ** ಹಾಗೂ ಚಿತ್ತರಗಿ-ಇಳಕಲ್ಲ ಭಕ್ತರ ಭಕ್ತಿಗೆ ಒಲಿದು ಈ ಪೀಠವನ್ನಲಂಕರಿಸಿದವರು. **'ಕಲ್ಯಾಣದಪ್ಪ'** ಬಸವಣ್ಣನವರ ವಚನಗಳಲ್ಲಿ ಅಪಾರ ಶ್ರದ್ಧೆ, ಬಸವ ಭಕ್ತರಾಗಿ ಕುದುರೆ ಮೇಲೆ ಕುಳಿತು, ಮಹಾಂತಮ್ಮ ಎಂಬ ಆಕಳೊಂದಿಗೆ ಶಿವಾನುಭವ ಚರವರ್ಯರಾಗಿ ನಾಡನ್ನೆಲ್ಲ ಸಂಚರಿಸಿ, ಪಾವನ ಮಾಡಿದವರು. "ಚಿತ್ತರಗಿ ದೊರೆಯೇ ನಿನಗಾರು ಸರಿಯೇ, ಸರಿ ಎಂದವರ ಕೈ ಕಾಲು ಮುರಿಯೆ ಬಹುಪರಾಕ್" ಎಂದು ಉಗ್ಘಡಿಸುವ ಭಕ್ತ ಸಮೂಹದ ಘೋಷಣೆ ಇಂದಿಗೂ ಜೀವಂತವಾಗಿದೆ. ಶಿವಯೋಗಮಂದಿರದ ಸ್ಥಾನವನ್ನು ತೋರಿ ಪೂಜ್ಯ ಹಾನಗಲ್ಲ ಕುಮಾರ ಸ್ವಾಮಿಗಳಿಗೆ ಮಾರ್ಗದರ್ಶನ ಮಾಡಿದ ಮಹಾಮಹಿಮರಿವರು. ಘನಮಠಾರ್ಯರ ಒಡನಾಡಿಗಳು.

## ಶ್ರೀ ಗುರು ಮಹಾಂತ ಸ್ವಾಮಿಗಳು (ದೋಟಿಹಾಳ) : (೧೯೨೮ -೧೯೩೪)

ಚಿತ್ತರಗಿ ಪೀಠದ ೧೭ನೆಯ **ಪೀಠಾಧಿಪತಿ**ಗಳಾಗಿ ಶರಣ ಸಂಸ್ಕೃತಿಯ ಪುನರುತ್ಥಾನಕ್ಕಾಗಿ ಶ್ರಮಿಸಿದವರು. ಪೂಜ್ಯರು ಅನೇಕ ಅನುಭಾವಿ ಪಂಡಿತರನ್ನು ಶಾಸ್ತ್ರಿಗಳನ್ನು ಕರೆದುಕೊಂಡು ಅನುಭಾವ ಮಾಡುತ್ತಾ ಸಂಚರಿಸಿದವರು.

## ಶ್ರೀ ಕೊಪ್ಪದ ಮಹಾಂತ ಸ್ವಾಮಿಗಳು : (೧೯೩೪ -೧೯೬೩)

ಪೂಜ್ಯರು ಚಿತ್ತರಗಿ ಪೀಠದ ಅಧಿಪತಿಗಳಾಗದೇ, ತ್ಯಾಗಮನೋಭಾವದಿಂದ ಮಠದ ಸರ್ವಾಡಳಿತವನ್ನು ನಡೆಯಿಸಿದವರು. ಅನೇಕ ಶಾಖಾಮಠಗಳನ್ನು ಸ್ಥಾಪಿಸಿದವರು. ಇವರ ಕಾಲದಲ್ಲಿಯೇ ಸಸಿವಾಳದ ಮಹಾಂತ ದೇವರು

ಉತ್ತರಾಧಿಕಾರಿಗಳಾಗಿ ಬಂದು, ಕಾಶಿಯಲ್ಲಿ ಓದಲು ಹೋದವರು, ವಿದ್ಯಾರ್ಜನೆ ಮುಗಿಯುವ ಕಾಲಕ್ಕೆ ಚಿತ್ತರಗಿ ಪೀಠಕ್ಕೆ ಅಧಿಕಾರಿಗಳಾಗದೆ, ಹುಬ್ಬಳ್ಳಿ ಮೂರುಸಾವಿರ ಮಠಕ್ಕೆ ಜಗದ್ಗುರುಗಳಾಗಿ ಹೋದರು.

**ಶ್ರೀ ಗುರು ಮಹಾಂತ ಸ್ವಾಮಿಗಳು (ಜಮಖಂಡಿ) : (೧೯೬೩ -೧೯೭೦)**

ಈ ಪೂಜ್ಯರು ಚಿತ್ತರಗಿ ಪೀಠದ ೧೮ನೆಯ ಪೀಠಾಧಿಪತಿಗಳಾಗಿದ್ದು ಶೈಕ್ಷಣಿಕ ವಾಗಿ ಸಮಾಜಕ್ಕೆ ಬಹುದೊಡ್ಡ ಸೇವೆ ಸಲ್ಲಿಸಿದವರು. ಇಳಕಲ್ಲ ನಗರದಲ್ಲಿರುವ 'ಶ್ರೀ ವಿಜಯಮಹಾಂತೇಶ ವಿದ್ಯಾವರ್ಧಕ ಸಂಘ'ವನ್ನು ಸ್ಥಾಪಿಸಿ ಈ ಸಂಘದ ವತಿಯಿಂದ ಶ್ರೀ ವಿಜಯ ಮಹಾಂತೇಶ ಕಲಾ, ವಿಜ್ಞಾನ ಹಾಗೂ ವಾಣಿಜ್ಯ ಮಹಾವಿದ್ಯಾಲಯ ಪ್ರಾರಂಭಿಸಿದರು. ಶ್ರೀ ವಿಜಯಮಹಾಂತೇಶ ತರುಣ ಸಂಘವನ್ನು ಸ್ಥಾಪಿಸಿ, ಯುವ ಜನಾಂಗವನ್ನು ಶಿವಾನುಭವ ಚಟುವಟಿಕೆಗಳಿಗೆ ತೊಡಗಿಸಿದವರು. ಶಿಕ್ಷಣ ಸಂಸ್ಥೆ ಪ್ರಾರಂಭಿಸುವಲ್ಲಿ ಇಳಕಲ್ಲದ ಹಿರಿಯ ನಾಗರಿಕರ ಹಾಗೂ ಮಾನ್ಯ ಶ್ರೀ ಕಂಠಿ ಅವರ ಸಹಕಾರ ಪಡೆದು ಕಾರ್ಯಮಾಡಿದವರು, ಅಕಾಲಿಕವಾಗಿ ವಾಹನ ಅಪಘಾತದಲ್ಲಿ ಲಿಂಗದೊಳಗಾದರು.

**ಶ್ರೀ ಡಾ. ಮಹಾಂತ ಸ್ವಾಮಿಗಳು (ಸವದಿ) : (೧೯೭೦ ರಿಂದ....)**

'ಜ್ಯೋತಿ ಮುಟ್ಟಿದ ಬತ್ತಿಗಳೆಲ್ಲಾ ಜ್ಯೋತಿಯಪ್ಪವಯ್ಯಾ' ಎಂಬಂತೆ ಬಸವ ಜ್ಯೋತಿಯನ್ನು ತನು-ಮನ-ಭಾವಕ್ಕೆ ಅಂಟಿಸಿಕೊಂಡು ಮಹಾಂತರು ಬಸವ ಜ್ಯೋತಿ ಯಾದರು. ಸಂಗಂ ಬಸವನೋ, ಬಸವಂ ಸಂಗನೋ ಎಂಬಂತೆ ಮಹಾಂತ ಬಸವರು, ಬಸವ ಮಹಾಂತರಾದರು.

ಚಿತ್ತರಗಿ ಪೀಠದ ೧೮ನೇ ಸ್ವಾಮಿಗಳಾಗಿದ್ದ ಶ್ರೀಮ.ನಿ.ಪ್ರ ಗುರುಮಹಾಂತರು ಆಕಸ್ಮಿಕವಾಗಿ ಲಿಂಗೈಕ್ಯರಾಗಲು, ತೆರವಾಗಿದ್ದ ಪೀಠಕ್ಕೆ ಚಿತ್ತರಗಿ ಇಳಕಲ್ಲ ಭಕ್ತರ ಪ್ರಾರ್ಥನೆ ಬಸವಗುರು ಪ್ರೇರಣೆಯಂತೆ, ಹಾಲಕೆರೆ, ಹಾನಗಲ್ಲ, ಹುಬ್ಬಳ್ಳಿ ಮುರಗೋಡ ಶ್ರೀಗಳವರ ಸದಿಚ್ಛೆಯಂತೆ ಸವದಿಯ ಸದ್ಭಕ್ತಳ ಹೃದಯವಂತಿಕೆಯಿಂದಾಗಿ ಅವರ ಒಪ್ಪಿಗೆ ಪಡೆದು ಸವದಿಯ ಮಹಾಂತಸ್ವಾಮಿಗಳು, ಚಿತ್ತರಗಿ ಸಂಸ್ಥಾನ ಇಳಕಲ್ಲದ **೧೯ನೆಯ ಮಠಾಧಿಪತಿಗಳಾಗಿ** ಅಧಿಕಾರ ಸ್ವೀಕರಿಸಿದರು. ೧೯೭೦ನೇ ಇಸ್ವಿ ಮೇ ೭ ರಂದು ಪೂಜ್ಯರ ಪಟ್ಟಾಧಿಕಾರ ಮಹೋತ್ಸವ ಜರುಗಿತು. ಹಾನಗಲ್ಲದ ಪೂಜ್ಯಶ್ರೀ ಕುಮಾರ ಮಹಾಸ್ವಾಮಿಗಳವರಿಂದ ಅನುಗ್ರಹಿತರಾಗಿದ್ದ ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲೂಕಿನ ಕಾಪನಹಳ್ಳಿಯ ಪೂಜ್ಯ ಶಿವಯೋಗಿಗಳವರು ನಿರಂಜನ ಸಿಂಹಾಸನಾರೋಹಣಗೈಸಿದರು. ಪೂಜ್ಯರೊಂದಿಗೆ ಆಸೀನರಾದರು.

ಮಹಾತಪಸ್ವಿ ಲಿಂ. ವಿಜಯಮಹಾಂತ ಶಿವಯೋಗಿಗಳು ಬಸವಣ್ಣನವರ ವಚನಗಳನ್ನು 'ಅಪ್ಪನವರ ವಚನಗಳು' ಎಂದು ಬೆನ್ನಿಗೆ ಕಟ್ಟಿಕೊಂಡು ಕುದುರೆ ಮೇಲೆ ಕುಳಿತುಕೊಂಡು, ನಾಡನ್ನೆಲ್ಲಸಂಚರಿಸಿ ಬಸವ ವಚನ-ಶಿವಾನುಭವ ಮಾಡುತ್ತಾ ಚಿತ್ತರಗಿ ಪೀಠದ ೬೪ ಶಾಖಾಮಠಗಳಲ್ಲಿ ಶಿವಾನುಭವ ನಡೆವಂತೆ ಮಾಡಿದ್ದರು. ಹಾನಗಲ್ಲ ಕುಮಾರ ಸ್ವಾಮಿಗಳವರ ಪ್ರಾರ್ಥನೆಗೆ ಓಗೊಟ್ಟು, ಶಿವಯೋಗಮಂದಿರದ ಸ್ಥಳ ತೋರಿಸಿ, ಅನುಗ್ರಹ-ಕರುಣೆ ಹರಿಸಿದ್ದರು. ಅಂತಹ ಪವಿತ್ರ ಶಿವಯೋಗಮಂದಿರ ದಲ್ಲಿ ಅಧ್ಯಯನ-ಸಾಧನೆಗೈದ ಸವದಿಯ ಮಹಾಂತರು, ಚಿತ್ತರಗಿ ಪೀಠಕ್ಕೆ ಅಧಿಪತಿಗಳಾಗಿ ಬಂದುದು ಚಿತ್ತರಗಿ ಜ್ಯೋತಿಯ ಬಸವಜ್ಯೋತಿಯಾಗಿ, ಜಗಜ್ಯೋತಿ ಯಾಗಿ, ಭೂಮಂಡಲವನ್ನೇ ಬೆಳಗುವಂತಾಯಿತು.

ಚಿತ್ತರಗಿ ಸಂಸ್ಥಾನಮಠ ಇಳಕಲ್ಲ ಇದರ ಶಾಖೆಗಳು ವಿಜಾಪುರ, ರಾಯಚೂರ, ಬೆಳಗಾವಿ, ಹೈದ್ರಾಬಾದ, ಚಿತ್ರದುರ್ಗ ಮುಂತಾದ ಭಾಗಗಳಲ್ಲಿದ್ದು ಕೆಲವು ಕಾಲ ಗರ್ಭದಲ್ಲಿಮರೆಯಾಗಿದ್ದರೆ, ಇನ್ನು ಕೆಲವು ಜೀರ್ಣಾವಸ್ಥೆಗೆ ತಲುಪಿದ್ದವು. ಪೂಜ್ಯರು ೧೯೭೦ ರಲ್ಲಿ ಚಿತ್ತರಗಿ ಪೀಠದ ಅಧಿಕಾರವಹಿಸಿಕೊಂಡ ನಂತರ ಶಾಖಾಮಠಗಳ ಜೀರ್ಣೋದ್ಧಾರ, ಅಲ್ಲಿ ಶಿವಾನುಭವ, ದಾಸೋಹ ನಡೆಯುವಂತೆ ಮಾಡಿದರು.

೧೯೭೪ ರಲ್ಲಿ ಪರಮಪೂಜ್ಯ ಲಿಂ. ವಿಜಯಮಹಾಂತ ಶಿವಯೋಗಿಗಳವರ ೬೩ನೇ ಪುಣ್ಯಸ್ಮರಣೋತ್ಸವದ ಸಂದರ್ಭ. ಪೂಜ್ಯರು ಹುನಗುಂದದ ತಮ್ಮ ಶಾಖಾ-ಮಠದಲ್ಲಿ ೬೩ ಜನ ಗುರು-ವಿರಕ್ತ ಸ್ವಾಮಿಗಳವರ ಜಂಗಮಪೂಜಾ ಮಹೋತ್ಸವ ಹಾಗೂ ಶಿವಾನುಭವ ಗೋಷ್ಠಿಗಳನ್ನು ಶ್ರೀ ಮಠದ ಸದ್ಭಕ್ತರ ಸದಿಚ್ಛೆ-ಸಹಕಾರ-ಗಳೊಂದಿಗೆ ಹಮ್ಮಿಕೊಂಡಿದ್ದರು. ಕಾರ್ಯಕ್ರಮಗಳೆಲ್ಲ ಯಶಸ್ವಿಯಾಗಿ ಜರುಗಿದವು. ಆದರೆ ಕೊನೆಯ ಸಂದರ್ಭದಲ್ಲಿ ಗುರುವರ್ಗದ ಒಬ್ಬ ಹಿರಿಯ ಮಠಾಧಿಪತಿಗಳು ಹಾಗೂ ವಿರಕ್ತವರ್ಗದ ಒಬ್ಬ ಹಿರಿಯ ಮಠಾಧಿಪತಿಗಳಲ್ಲಿ ತಾತ್ವಿಕ ಹಾಗೂ ವ್ಯಕ್ತಿಗತ ಭಿನ್ನಾಭಿಪ್ರಾಯ ಉಂಟಾಗಿ ಬಹಿರಂಗ ವೇದಿಕೆಯ ಮೇಲೆ ಅದು ಕಲಹ-ಗೊಂದಲ-ಮಯವಾಗಿ ಮಾರ್ಪಾಟಾಯಿತು.

ಬಸವತತ್ವ ಪ್ರಸಾರದ ಮಹಾಮಣಿಹದಲ್ಲಿ ಗುರು-ವಿರಕ್ತರು ಒಂದಾಗಿ ಸೇವಾ-ಮನೋಭಾವದಿಂದ ಸಮಾಜೋ-ಧಾರ್ಮಿಕ ಕಾರ್ಯ ನಿರ್ವಹಿಸುವಂತಾಗಬೇಕೆಂಬ ಲಿಂ. ಹಾನಗಲ್ಲ ಕುಮಾರಸ್ವಾಮಿಗಳವರ ಸತ್‌ಸಂಕಲ್ಪ ಈಡೇರಿಸುವ ನಿಟ್ಟಿನಲ್ಲಿ ಪೂಜ್ಯ ಮಹಾಂತಸ್ವಾಮಿಗಳು ಒಂದು ಪ್ರಾಣಿಕ ಪ್ರಯತ್ನ ಮಾಡಿದ್ದರು, ಅದು ಈ ರೀತಿಯ

ವಿಪರೀತಕ್ಕೆಡೆ ಮಾಡಿದುದನ್ನು ಮನಗಂಡ ಪೂಜ್ಯರು ಮನನೊಂದರು. ಹಗಲಿರುಳು ಚಿಂತನ ನಡೆಸಿದರು. ಇಷ್ಟಲಿಂಗ ಪೂಜೆಯಲ್ಲಿ ನಿರತರಾದರು. ಶಿವಾನುಭಾವಿ ಶರಣರು, ಸದ್ಭಕ್ತರೊಂದಿಗೆ ಚಿಂತನಗೈದರು. ೧೯೭೫ ನವೆಂಬರ ತಿಂಗಳು- ಬಸವ ಗುರು ಕರುಣೆ, ವಿಜಯಮಹಾಂತ ಶಿವಯೋಗಿಗಳ ಪ್ರೇರಣೆಯಿಂದ ಏಕಾಂಗ ವೀರರಾಗಿ ಸಮಾಜೋ-ಧಾರ್ಮಿಕ ಮಹಾಮಣಿಹ ಪೂರೈಸಲು ದೃಢಸಂಕಲ್ಪ ತಾಳಿದರು.

ಚಿತ್ತರಗಿ ಪೀಠವು ಮೂಲತಃ ಬಸವತತ್ವಾಧಾರಿತವಾದ ಶೂನ್ಯಪೀಠ ಪರಂಪರೆಯ ನಿರಂಜನ ಜಂಗಮವಿಭು ಅಲ್ಲಮಪ್ರಭು ಸಂಪ್ರದಾಯದ ಶರಣಸ್ಥಲದ ಮಠವಾದುದರಿಂದ ೧೫ನೇ ಶತಮಾನದಲ್ಲಿ ತೋಂಟದಸಿದ್ಧಲಿಂಗ ಶಿವಯೋಗಿಗಳ ವರಶಿಷ್ಯ ಶ್ರೀ ವಿಜಯಮಹಾಂತ ಸ್ವಾಮಿಗಳವರಿಂದ ಪುನರುಜ್ಜೀವನ ಹೊಂದಿದುದ-ರಿಂದ ಪೂಜ್ಯರಾದ ಮಹಾಂತಸ್ವಾಮಿಗಳು ೧೯೭೫ ರಲ್ಲಿ ಎರಡು ಯೋಜನೆಗಳನ್ನು ಹುಟ್ಟುಹಾಕಿದರು.

೧) ಶರಣಸಿದ್ಧಾಂತ ವಿದ್ಯಾಪೀಠ ಸ್ಥಾಪನೆ

೨) ಮಹಾಂತ ಜೋಳಿಗೆಯ ಯೋಜನೆ

ಷಟ್‌ಸ್ಥಲ ಚಕ್ರವರ್ತಿ ಚೆನ್ನಬಸವಣ್ಣನವರು ವಚನ ಸಂದೇಶ ನೀಡಿರುವಂತೆ-

ಬಸವ ಎಂಬ ಮೂರಕ್ಷರ
ಹೃದಯಕಮಲದಲ್ಲಿ ನೆಲೆಗೊಂಡಡೆ
ಅಭೇದ್ಯ ಭೇದ್ಯವಾಯಿತ್ತು.
ಅಸಾಧ್ಯ ಸಾಧ್ಯಾವಾಯಿತ್ತು.
ಇಂತು ಬಸವಣ್ಣನಿಂದ
ಲೋಕ ಲೌಕಿಕದ ಕುಭಾಷೆಯ ಕಳೆದು
ಲೋಕಾಚರಣೆಯನಿತಿಗಳೆದು
ಭಕ್ತಿ ಭರವಪ್ಪುದು ಕೂಡಲಚೆನ್ನಸಂಗಯ್ಯನಲ್ಲಿ
ಬಸವಣ್ಣನ ಕಾರುಣ್ಯದಿಂದ

'ಬಸವ' ಮಂತ್ರ ಪೂಜ್ಯರ ಉಸಿರಾಯಿತು, ಬಸವತತ್ವದ ಆಚರಣೆ, ಪ್ರಸಾರ ಪೂಜ್ಯರ ಧ್ಯೇಯವಾಯಿತು.

'ಸಮಾಜ-ಧರ್ಮ' 'ವ್ಯಷ್ಟಿ-ಸಮಷ್ಟಿ' ಎರಡರ ಶುದ್ಧೀಕರಣವಾಗಬೇಕು. ಮಹಾಂತ ಜೋಳಿಗೆಯು ವ್ಯಕ್ತಿಯ ಅಂತರಂಗ-ಬಹಿರಂಗದ ದುರ್ವ್ಯಸನ-ದುರಾಚಾರಗಳ ಭಿಕ್ಷೆ ಬೇಡುತ್ತಾ ಜನಮಾನಸದ ಹೃದಯ ಭೂಮಿಯನ್ನು ಹಸನು ಮಾಡುತ್ತಾ ಸಾಗಿದರೆ, ಶರಣ ಸಿದ್ಧಾಂತ ವಿದ್ಯಾಪೀಠವು ಶಿವಾನುಭವ ಶಿಬಿರ-ಕಮ್ಮಟ-ಗಳನ್ನು ಸಂಘಟಿಸುತ್ತಾ ಹಸನಗೊಂಡ ಹೃದಯ ಭೂಮಿಯಲ್ಲಿ ಬಸವತತ್ವದ ಬೀಜಗಳನ್ನು ಬಿತ್ತುತ್ತಾ ಸಾಗಿತು. ಪೂಜ್ಯರು ಅಲ್ಲಮಪ್ರಭುಗಳು ವಚನ ಸಂದೇಶ ನೀಡಿರುವಂತೆ-

"ಸಮಾಜ ಜೀವನದ ಪ್ರತಿಯೊಬ್ಬ ವ್ಯಕ್ತಿಯ ತನುವ ತೋಟವ ಮಾಡಿ, ಮನವ ಗುದ್ದಲಿಯ ಮಾಡಿ ಭ್ರಾಂತಿಯ ಬೇರನ್ನು ಅಗಿದು ಕಳೆದರು. ಸಂಸಾರದ ಹೆಂಟೆಯ ಒಡೆದರು, ಬ್ರಹ್ಮಬೀಜವ ಬಗ್ಗಿದು ಬಿತ್ತಿದರು. ಅಖಂಡಮಂಡಲವೆಂಬ ಬಾವಿ, ಪವನವೆ ರಾಟಾಳ, ಸುಷುಮ್ನನಾಳದಿಂದ ಉದಕವ ತಿದ್ದಿ, ಬಸವಗಳೈವರು (ಪಂಚೇಂದ್ರಿಯ-ಗಳು) ಹಸಗೆಡಿಸಿಹವೆಂದು ಸಮತೆ-ಸೈರಣೆಯ ಬೇಲಿಯನಿಕ್ಕಿ ಆವಾಗಳೂ ಜಾಗರವಿದ್ದು ಬಸವತತ್ವದ ಸಸಿಯ ಸಲಹಿದರು."

ಪೂಜ್ಯರು ಚಿತ್ತರಗಿ ಪೀಠದ ಕೀರ್ತಿಯನ್ನು ಗಗನದೆತ್ತರಕ್ಕೆ ಪಸರಿಸಿದ್ದಾರೆ. ಪೂಜ್ಯರು ಬಸವತತ್ವದ ನಿಜಾಚರಣೆ ಮಾಡಿದರು. ಮಠಗಳಲ್ಲಿ ಬಸವೇಶ್ವರ ವಚನ ಪಾಠ ಶಾಲೆಗಳನ್ನು ಪ್ರಾರಂಭಿಸಿದ್ದು, ಶ್ರೀಮಠದ ಗದ್ದುಗೆಗಳ ಮೇಲೆ ವಚನ ಗ್ರಂಥ-ಗಳನ್ನು ಇರಿಸಿದ್ದು, ಜಾತ್ರೆಗಳನ್ನು ಶರಣ ಸಂಸ್ಕೃತಿ ಮಹೋತ್ಸವಗಳನ್ನಾಗಿ ಪರಿವರ್ತಿಸಿದ್ದು, ಬಸವಕೇಂದ್ರ ಸ್ಥಾಪಿಸಿದ್ದು, ಮನೆಗಳಲ್ಲಿ ಮಹಾಮನೆ ಕಾರ್ಯಕ್ರಮ-ಗಳು, ನೂತನ ಮನೆಗಳ ಗುರುಪ್ರವೇಶ, ವಚನ ಮಂತ್ರಗಳ ಮೂಲಕ ಕಲ್ಯಾಣ ಮಹೋತ್ಸವ, ಕಾಯಕ ಸಂಜೀವನಿ ಸಂಸ್ಥೆ, ಲಿಂಗವಂತ ಧರ್ಮಗ್ರಂಥ ಬಹುಮಾನ ಯೋಜನೆ, ಬಸವಗುರು ಕಾರುಣ್ಯ ಪ್ರಶಸ್ತಿ, ಧರ್ಮ ಪ್ರಸಾರಕ ಮಂಡಲ ಪ್ರಕಾಶನ, ವಚನ ಗ್ರಂಥಗಳ ಪ್ರಕಟಣೆ ಪ್ರಸಾರ ಯೋಜನೆ, ಪ್ರೊ. ಸಿದ್ಧಣ್ಣ ಲಂಗೋಟಿ ಅವರ ಸಂಪಾದಕತ್ವದಲ್ಲಿ 'ಬಸವ ಬೆಳಗು' ಪತ್ರಿಕೆ ಪ್ರಾರಂಭಿಸಿದ್ದು, ೫ ಲಕ್ಷ ಜನರಿಗೆ ಉಚಿತ ವಾಗಿ ಇಷ್ಟಲಿಂಗದೀಕ್ಷೆ, ಲಕ್ಷಾಂತರ ಜನರಿಂದ ದುಶ್ಚಟಗಳ ಭಿಕ್ಷೆ, ಬಸವಕಲ್ಯಾಣ ಅನುಭವ ಮಂಟಪಕ್ಕಾಗಿ ಬಸವ ಸಂದೇಶ ಯಾತ್ರೆ ಗೈದು ನಿಧಿ ಸಂಗ್ರಹಿಸಿ ಕೊಟ್ಟದ್ದು, ವಿಮೋಚನಾ ದೇವದಾಸಿ ಸಂಸ್ಥೆಗೆ ಮಾರ್ಗದರ್ಶನ, ಗುರುಬಸವ ಪ್ರಸಾದ ಟ್ರಸ್ಟ್, ಕಲ್ಯಾಣ ನಾಡಿನ ಶರಣ ಪರಿಷತ್ತಿಗೆ ಗೌರವ ಅಧ್ಯಕ್ಷರಾಗಿ ಸೇವೆ, ಇಂಗ್ಲೆಂಡಿನಲ್ಲಿ ಬಸವ

ಇಂಟರ್‌ನ್ಯಾಶನಲ್ ಫೌಂಡೇಶನ್ ಸ್ಥಾಪನೆ, ಶಾಖಾಮಠಗಳಿಗೆ ದಲಿತರಿಗೆ ಜಂಗಮ ದೀಕ್ಷೆ ನೀಡಿ ಸ್ವಾಮಿಗಳನ್ನಾಗಿಸಿದ್ದು, ಚಿತ್ತರಗಿ ಸಂಸ್ಥಾನಮಠ ಇಳಕಲ್ಲಕ್ಕೆ ಲಿಂಗವಂತ ಭಕ್ತ ಮನೆತನದ ಗುರುಮಹಾಂತ ಸ್ವಾಮಿಗಳನ್ನು ಉತ್ತರಾಧಿಕಾರಿ ಮಾಡಿಕೊಂಡದ್ದು, ಬರಗಾಲದಲ್ಲಿ ಗಂಜಿ ಕೇಂದ್ರಗಳ ಸ್ಥಾಪನೆ, ಬಡ ರೈತರಿಗೆ ಶ್ರೀಮಠದ ಭೂಮಿಗಳನ್ನು ಬಿಟ್ಟುಕೊಟ್ಟದ್ದು, ಶಿಕ್ಷಣ ಸಂಸ್ಥೆಗೆ ಕಲ್ಲಿನ ಗುಡ್ಡಗಳನ್ನು ನೀಡಿದ್ದು, ತರುಣ ಸಂಘಗಳ ಸ್ಥಾಪನೆ, ಅಕ್ಕನಬಳಗಗಳ ಸ್ಥಾಪನೆ, ಶರಣ ಹಳಕಟ್ಟಿಯವರ ಶತಮಾನೋತ್ಸವ ಆಚರಣೆ, ಶರಣ ಹರ್ಡೇಕರ ಮಂಜಪ್ಪನವರ ಶತಮಾನೋತ್ಸವ ಆಚರಣೆ, ಶರಣ ಉತ್ತಂಗಿ ಚೆನ್ನಪ್ಪನವರಶತಮಾನೋತ್ಸವ ಆಚರಣೆ, ರಾಜ್ಯ ಮಟ್ಟದ ತರುಣ ಸಂಘಗಳ ಸಮ್ಮೇಳನ ಜರುಗಿಸಿದ್ದು, ಮಾದಾರ ಚೆನ್ನಯ್ಯನಕೇರಿಗಳ, ಡೋಹರ ಕಕ್ಕಯ್ಯನ ಕೇರಿಗಳ, ಸಮಗಾರ ಹರಳಯ್ಯನ ಕೇರಿಗಳ, ಹೊಲೆಯರ ಶಿವನಾಗಮಯ್ಯನ ಕೇರಿಗಳ ದಲಿತ ಬಂಧುಗಳಿಗೆ ಲಿಂಗದೀಕ್ಷೆ ನೀಡಿ, ಅವರ ಮನೆಗಳಲ್ಲಿ ಪೂಜೆ-ಪ್ರಸಾದ ಮಾಡಿದ್ದು, ಶಿರೂರ ವಿಜಯಮಹಾಂತೇಶ್ವರ ತೀರ್ಥದಲ್ಲಿ ನಿಸರ್ಗ ಚಿಕಿತ್ಸಾ-ಶಿವಯೋಗ ಕೇಂದ್ರ ಸ್ಥಾಪನೆ, ದಿಲ್ಲಿಯಲ್ಲಿ ಮೂರುಸಾವಿರ ಜಾಟವ ಜನಾಂಗದವರಿಗೆ ಲಿಂಗದೀಕ್ಷೆ ನೀಡಿದ್ದು, ಇಳಕಲ್ಲದಲ್ಲಿ ಅಶ್ವಾರೂಢ ಬಸವೇಶ್ವರ ಭವ್ಯಪುತ್ಥಳಿ ಅನಾವರಣ-ಆರ್ಥಿಕ ಸಹಾಯ, ದಲಿತ ಜನಾಂಗದ ಶರಣ ಮನೆತನದವರಗಳಿಗೆ ಲಿಂಗವಂತರ ಕನ್ಯೆಗಳನ್ನು ಕೊಡಿಸಿ ಕಲ್ಯಾಣ ಮಹೋತ್ಸವ ಜರುಗಿಸಿದ್ದು, ಬೀದರಿನ ಬಸವಾಂಜಲಿ ತಾಯಿಗೆ ನಿರಂಜನ ದೀಕ್ಷೆ-ಪಟ್ಟಾಭಿಷೇಕ, ನಾಗನೂರಿನ ಬಸವ ಪ್ರಕಾಶ-ಬಸವ ಗೀತಾ ಭಕ್ತ ದಂಪತಿಗಳಿಗೆ ಜಂಗಮದೀಕ್ಷೆ ಪಟ್ಟಾಭಿಷೇಕ, ಬಸವಾದಿ ಶರಣ ಸ್ಮರಣೋತ್ಸವಗಳ ಆಚರಣೆ, ೪೦ ವರುಷಗಳಿಂದ ದೇಶ-ವಿದೇಶಗಳಲ್ಲಿ ಮಹಾಂತಜೋಳಿಗೆ ಸಂಚಾರ, ಶಿವಾನುಭವ ಶಿಬಿರ-ಕಮ್ಮಟಗಳು, ಪ್ರೊ. ಸಿದ್ಧಣ್ಣ ಲಂಗೋಟಿ ಅವರ ಸಂಚಾಲಕತ್ವದಲ್ಲಿ ಸಂಯೋಜನೆ, ನಾಡಿನ ಅನುಭಾವಿ ಶರಣರನ್ನು ಪ್ರತಿವರ್ಷ ಗೌರವ-ಸನ್ಮಾನ ಮಾಡುತ್ತಿರುವುದು, ಇಳಕಲ್ಲ ಶ್ರೀ ವಿಜಯಮಹಾಂತೇಶ ವಿದ್ಯಾವರ್ಧಕ ಸಂಘದ ಅಧ್ಯಕ್ಷರಾಗಿ, ಹುನಗುಂದ ಶ್ರೀ ವಿಜಯಮಹಾಂತೇಶ ವಿದ್ಯಾವರ್ಧಕ ಸಂಘದ ಅಧ್ಯಕ್ಷರಾಗಿ ಬಾಗಲಕೋಟೆಯ ಶ್ರೀ ಬಸವೇಶ್ವರ ವಿದ್ಯಾವರ್ಧಕ ಸಂಘದ ಅಧ್ಯಕ್ಷರಾಗಿ, ಬಸವ ಕಲ್ಯಾಣ ಅನುಭವ ಮಂಟಪ ವಿಶ್ವ ಬಸವ ಧರ್ಮ ಟ್ರಸ್ಟಿನ ಗೌರವ ಅಧ್ಯಕ್ಷರಾಗಿ ಮಾರ್ಗದರ್ಶನ ಮಾಡುತ್ತಿರುವರು.

ಪೂಜ್ಯರ ಈ ಎಲ್ಲ ಸಾಧನೆಗಳನ್ನು ಮನಗಂಡ ಕರ್ನಾಟಕ ವಿಶ್ವವಿದ್ಯಾಲಯವು ಜನೇವರಿ ೨೧, ೨೦೦೯ ರಂದು **ಗೌರವ ಡಾಕ್ಟರೇಟ್** ನೀಡಿ ಗೌರವಿಸಿದೆ. ಕರ್ನಾಟಕ

ಮದ್ಯಪಾನ ಸಂಯಮ ಮಂಡಳಿ **ಸಂಯಮ ಪ್ರಶಸ್ತಿ** ಗೌರವ ಹಾಗೂ ೧ ಲಕ್ಷ ರೂ. ನೀಡಿ ಗೌರವಿಸಿದೆ. ಕರ್ನಾಟಕ ಸರ್ಕಾರವು **ರಾಷ್ಟ್ರೀಯ ಬಸವ ಪುರಸ್ಕಾರ** ಗೌರವ ಪ್ರಶಸ್ತಿ ಹಾಗೂ ೧೦ ಲಕ್ಷ ರೂಪಾಯಿ ನೀಡಿ ಗೌರವಿಸಿವೆ. ಈ ಹಣವನ್ನು ಪೂಜ್ಯರು ಬಸವತತ್ವಕ್ಕಾಗಿ ದುಡಿಯುತ್ತಿರುವ ನಾಡಿನ ಹಿರಿಯ ಶರಣ ಸಾಹಿತಿಗಳಿಗೆ ಪ್ರತಿಯೊಬ್ಬರಿಗೆ ಒಂದೊಂದು ಲಕ್ಷ ರೂಪಾಯಿ ನೀಡಿ, ಅವರವರ ಊರುಗಳಿಗೆ ಹೋಗಿ ಗೌರವ ಸತ್ಕಾರ ಮಾಡಿದ್ದಾರೆ. ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ ಎಂಬ ಗುರು ಬಸವಣ್ಣನವರ ವಚನ ಆದರ್ಶವನ್ನು ಪಾಲಿಸುತ್ತಿರುವರು.

ದಿನಾಂಕ ೧೬-೧೨-೨೦೦೩ ರಂದು ನರಗುಂದದ ಲಿಂಗವಂತ ಭಕ್ತ ಮನೆತನದ ಶ್ರೀ ಸಿದ್ಧರಾಮಸ್ವಾಮಿಗಳನ್ನು (ಪೂರ್ವಾಶ್ರಮದ ಹೆಸರು ಶಿವನಾಗಪ್ಪ ಹೆಗಡಾಳ) ಉತ್ತರಾಧಿಕಾರಿಯಾಗಿ ಮಾಡಿಕೊಂಡರು. ಅನಂತರ ದಿನಾಂಕ ೧೨-೦೯-೨೦೦೪ ರಂದು ನಾಡಿನ ಹರ-ಗುರು-ಚರಮೂರ್ತಿಗಳ ಸಾನಿಧ್ಯದಲ್ಲಿ ಶ್ರೀಮಠದ ಭಕ್ತ ಸಮ್ಮುಖದಲ್ಲಿ ಪಟ್ಟಾಧಿಕಾರ ಮಹೋತ್ಸವ ಜರುಗಿಸಿ, ನಿರಂಜನ ಜಂಗಮ ಸ್ಥಲ ಕರುಣಿಸಿ '**ಶ್ರೀ ಮ.ನಿ.ಪ್ರ. ಗುರುಮಹಾಂತ ಸ್ವಾಮಿಗಳು**' ಎಂಬ ನೂತನ ಹೆಸರಿನಿಂದ **ಚಿತ್ತರಗಿ ಪೀಠದ ೨೦ನೇ ಪೀಠಾಧಿಕಾರಿಯನ್ನಾಗಿ** ಮಾಡಿದರು. ಮುಂದೆ ಇದೇ ಪೂಜ್ಯರನ್ನು ತಮ್ಮ ಅಥಣಿ ತಾಲೂಕಿನ ಸವದಿಯ ಶ್ರೀ ಸಂಗನಬಸವೇಶ್ವರ ವಿರಕ್ತಮಠಕ್ಕೂ ದಿನಾಂಕ ೧೯-೦೧-೨೦೦೫ ರಂದು ಬಸವ ಸೇವಾ ದೀಕ್ಷೆ ನೀಡಿ ೬ನೆಯ ಮಠಾಧಿಪತಿಯನ್ನಾಗಿ ಮಾಡಿದರು.

ಪೂಜ್ಯರು ತಮ್ಮ ಈ ೮೮ನೇ ವಯಸ್ಸಿನಲ್ಲಿಯೂ ನಿರಂತರವಾಗಿ ಕಿರಿಯ ಪೂಜ್ಯರಾದ ಶ್ರೀ ಗುರುಮಹಾಂತ ಸ್ವಾಮಿಗಳನ್ನು ಜೊತೆಗೆ ಕರೆದುಕೊಂಡು ಜಂಗಮವಾಗಿ ಸಂಚರಿಸುತ್ತಾ ಬಸವತತ್ವ ಪ್ರಸಾರದ ಮಹಾಮಣಿಹ ಪೂರೈಸುತ್ತಿದ್ದಾರೆ. ಬಸವ ಧರ್ಮ-ಸಂಸ್ಕೃತಿಯ ಪುನರುತ್ಥಾನದ **ಮಹಾದಂಡನಾಯಕ**ರಾಗಿ ಜಂಗಮ ಕಾಯಕ ಕೈಕೊಂಡಿದ್ದಾರೆ.

## ಭಾಗ-೨

# ಪೂಜ್ಯ ಶ್ರೀ ಗುರುಮಹಾಂತ ಸ್ವಾಮಿಗಳು (ನರಗಂದ)

## ಚಿತ್ತರಗಿ ಶ್ರೀ ವಿಜಯಮಹಾಂತೇಶ್ವರ ಸಂಸ್ಥಾನ ಮಠ, ಇಳಕಲ್ಲ

**೨೦ನೆಯ ಪೀಠಾಧಿಪತಿಗಳು (ಕ್ರಿ.ಶ. ೨೦೦೪ ರಿಂದ.....)**

**ಹಾಗೂ**

**(ಶ್ರೀ ಸಂಗನಬಸವ ಮಠ (ವಿರಕ್ತಮಠ) ಸವದಿ ತಾ. ಅಥಣಿ**

**೬ನೆಯ ಮಠಾಧಿಪತಿಗಳು (ಕ್ರಿ.ಶ. ೨೦೦೫ ರಿಂದ.....)**

### ೧. ಪ್ರಸಾವನೆ :

ಪರಮಪೂಜ್ಯ ಶ್ರೀ ಮ.ನಿ.ಪ್ರ. ಗುರುಮಹಾಂತ ಸ್ವಾಮಿಗಳವರ ಜನ್ಮಸ್ಥಳವು ಧಾರವಾಡ ಜಿಲ್ಲೆಯ (ಇಂದಿನ ಗದಗ ಜಿಲ್ಲೆಯ) ನರಗುಂದ ಪಟ್ಟಾಣವಾಗಿದೆ. ನರಗುಂದ ಪಟ್ಟಣವು ಪ್ರಾಚೀನ ಕಾಲದಿಂದಲೂ ಐತಿಹಾಸಿಕ ಮಹತ್ವವನ್ನು ಪಡೆದು-ದಾಗಿದೆ. ನವಶಿಲಾಯುಗದ ಸಂಸ್ಕೃತಿಗೆ ಸಂಬಂಧಿಸಿದ ಅನೇಕ ಕುರುಹುಗಳನ್ನು ಇತಿಹಾಸ ಸಂಶೋಧಕರು ಬೆಳಕಿಗೆ ತಂದಿದ್ದಾರೆ. ಕಲ್ಲಿನ ಕೊಡಲಿಗಳು, ಕಂದು ಬಣ್ಣದ ಮಡಕೆಗಳು, ಚಿಕ್ಕ ಗಾತ್ರದ ಕಲ್ಲಿನ ಚಾಕು, ಕತ್ತಿಗಳು ದೊರಕಿವೆ. ಅನಂತರ ತಾಮ್ರ ಯುಗದ ಕೆಲವು ಕುರುಹುಗಳು ಲಭ್ಯವಾಗಿವೆ. ಈ ಭಾಗವನ್ನು ಮೌರ್ಯರು, ಸಾತವಾಹನರು, ಬನವಾಸಿಯ ಕದಂಬರು, ಬದಾಮಿಯ ಚಾಲುಕ್ಯರು, ರಾಷ್ಟ್ರ-ಕೂಟರು, ಕಲ್ಯಾಣದ ಚಾಲುಕ್ಯರು, ಕಳಚುರಿ, ಯಾದವರು, ವಿಜಯನಗರ ಅರಸರು, ವಿಜಾಪುರದ ಆದಿಲ್‌ಶಾಹಿಗಳು, ಮೊಗಲರು, ಮರಾಠರು, ಆಳಿದ ಕುರಿತು ಇತಿಹಾಸ ಹೇಳುತ್ತದೆ. ಕ್ರಿ. ಶ. ೧೬೭೪ ರಲ್ಲಿ ಶಿವಾಜಿ ಮಹಾರಾಜನು ಇಲ್ಲಿ ಕೋಟೆಯನ್ನು ಕಟ್ಟಿಸಿದನು. ೧೭೮೫ ರಲ್ಲಿ ಟಿಪ್ಪುಸುಲ್ತಾನ ನರಗುಂದ ಕೋಟೆಯನ್ನು ವಶಪಡಿಸಿಕೊಂಡ. ೧೮೧೮ ರಲ್ಲಿ ಮರಾಠಾ ಪೇಶ್ವೆಗಳು ದಾದಾಜಿರಾವ ಅಪ್ಪ ಎಂಬಾತನಿಗೆ ನರಗುಂದವನ್ನು ವಹಿಸಿಕೊಟ್ಟರು. ಈ ವಂಶದ ಬಾಬಾಸಾಹೇಬನು (ಭಾಸ್ಕರರಾವ್ ಭಾವೆ) ನರಗುಂದ ಸಂಸ್ಥಾನದ ರಾಜನಾಗಿ ಜನಪ್ರಿಯ ಆಡಳಿತ ನಡೆಸಿದ (೧೮೪೨-೧೮೫೮) ಈ ನರಗುಂದ ಸಂಸ್ಥಾನವು ೪೧ ಹಳ್ಳಿಗಳನ್ನೊಳಗೊಂಡ ನಾಡಾಗಿತ್ತು. ಬ್ರಿಟೀಷರ ವಿರುದ್ಧ ಬಾಬಾಸಾಹೇಬ ಹೋರಾಟ ಮಾಡಿ, ಬ್ರಿಟಿಷ್

ಕಮೀಶನರ್ ಮ್ಯಾನ್ಸನ್‌ನ್ನು ಕೊಂದು, ಅವರ ರುಂಡವನ್ನು ನರಗುಂದ ಕೋಟೆಯ ಬಾಗಿಲಿಗೆ ಕಟ್ಟಿದ. ಅನಂತರ ನಡೆದ ಯುದ್ಧದಲ್ಲಿ ನರಗುಂದ ಬ್ರಿಟೀಷರ ಕೈವಶ ವಾಯಿತು. ಬಾಬಾಸಾಹೇಬನನ್ನು ಬೆಳಗಾವಿಯಲ್ಲಿ ನೇಣುಹಾಕಲಾಯಿತು. ಇತಿಹಾಸದಲ್ಲಿ ಇದು ನರಗುಂದ ಬಂಡಾಯವೆಂದೇ ಖ್ಯಾತಿಯಾಗಿದೆ.

ಈ ನರಗುಂದದಲ್ಲಿ ಚಾಳುಕ್ಯ ವಂಶದ ಮೂರನೇ ಸೋಮೇಶ್ವರ, ಎರಡನೆಯ ಜಗದೇಕಮಲ್ಲ ಮತ್ತು ಮೂರನೆಯ ತೈಲಪ ಇವರಿಗೆ ಸೇರಿದ ಮೂರು ಶಾಸನಗಳು ಇವೆ.

೧೨ನೆಯ ಶತಮಾನದ ಕಾಲಕ್ಕೆ ಕಲ್ಯಾಣ ಅನುಭವ ಮಂಟಪದ ಶರಣರು, ಚರಜಂಗಮರು ಸಂಚರಿಸಿದ್ದರಿಂದ ಈ ಭಾಗದಲ್ಲಿ ಲಿಂಗಾಯತ ಧರ್ಮ-ಸಮಾಜ-ಸಂಸ್ಕೃತಿಯು ಅಂದಿನಿಂದ ಇಂದಿನವರೆಗೂ ಅಸ್ತಿತ್ವದಲ್ಲಿದೆ. ೧೫ನೇ ಶತಮಾನದ ಕಾಲಕ್ಕೆ ನಂತರ ಎಡೆಯೂರು ತೋಂಟದ ಸಿದ್ಧಲಿಂಗೇಶ್ವರರ ಕಾಲಕ್ಕೆ ೭೦೧ ವಿರಕ್ತರು ಸಂಚರಿಸಿ ಅಲ್ಲಲ್ಲಿ ಮಠಗಳನ್ನು ಸ್ಥಾಪಿಸಿ, ಲಿಂಗಾಯತ ಧರ್ಮದ ಪುನರುಜ್ಜೀವನ ಮಾಡಿದರು. ನರಗುಂದದಲ್ಲಿಯೂ ಮಠಗಳಿವೆ. ಅವುಗಳಲ್ಲಿ ಚನ್ನಬಸವೇಶ್ವರ ವಿರಕ್ತಮಠ, ಮುರುಘಾಮಠ, ಪಂಚಗೃಹ ಹಿರೇಮಠ, ಪತ್ರಿವನಮಠ ಮುಂತಾದವು ಪ್ರಮುಖವಾಗಿವೆ. ಬೆಟ್ಟದ ಮೇಲೆ ಸಿದ್ಧೇಶ್ವರ ದೇವಾಲಯ, ಚಿನಿವಾಲಗಟ್ಟಿ ಬಸವೇಶ್ವರ ದೇವಾಲಯ, ಕೊಟ್ಟೂರ ಬಸವೇಶ್ವರ ದೇವಾಲಯ, ಹೊರಕೇರಿ ಬಸವೇಶ್ವರ ದೇವಾಲಯ, ಶಂಕರಲಿಂಗ ದೇವಸ್ಥಾನ, ವಿಠೋಬ ದೇವರ ಗುಡಿ, ಗಣೋಬಾ ಸಾಧು ಅಜ್ಜನ ಗುಡಿ, ವೀರಭದ್ರೇಶ್ವರ ದೇವಸ್ಥಾನ, ದಂಡೇಶ್ವರ ಗುಡಿ, ಹನುಮಂತ ದೇವಾಲಯ, ಮಹಾದೇವ ದೇವಸ್ಥಾನ, ಸಂಸ್ಥಾನಿಕರು ಕಟ್ಟಿಸಿದ ವೆಂಕಟೇಶ್ವರ ದೇವಸ್ಥಾನ, ನಗರೇಶ್ವರ ದೇವಾಲಯ, ಉಡಚಮ್ಮದೇವಸ್ಥಾನ, ಜೈನಬಸದಿ, ಹಾಗೂ ಇನ್ನೂ ಅನೇಕ ದೇವಾಲಯಗಳು, ಚರ್ಚ, ಮಸೀದೆಗಳೂ ಇವೆ.

ಇಂತಹ ನರಗುಂದ ಪಟ್ಟಣದಲ್ಲಿ ಲಿಂಗಾಯತ ಸಮಾಜದ ಮಠಗಳ ಪೂಜ್ಯರ ಸಮಾಜೋ-ಧಾರ್ಮಿಕ ಕಾರ್ಯಗಳಿಂದಾಗಿ ಸಮಾಜವು ಜಾಗೃತವಾಗಿದೆ. **ಲಿಂಗಾಯತ ಸಮಾಜದ ಪ್ರಮುಖ ಮನೆತನಗಳಾದ** ಹಸಬಿ, ಕಂಠಿ, ನಂದಿ, ಹೊಸಕೇರಿ, ಪಾಟೀಲ, ಗೋವೇಶ್ವರ, ಹಟ್ಟಿ, ವಾಳದ, ಅಸೂಟಿ, ಬ್ಯಾಹಟ್ಟಿ, ಕಾಲಚೆಟ್ಟಿ, ಕೋರಿ, ಚೌಕಿಮಠ, ಹಿರೇಮಠ, ಸಾಲೋಟಗಿಮಠ, ಕಾಡದೇವರಮಠ, ವಸ್ತ್ರದ, ದಂಡಿನ, ವಡ್ಡಿಗೇರಿ, ಜಂಬಗಿ, ಬೆಳವಟಗಿ, ಪೂಜಾರ, ಶಿರುಂದರಮಠ, ನಾಗಠಾಣ,

ಕುದರಿಮೋತಿ, ಬಸವರೆಡ್ಡಿ, ವೆಂಕಾರೆಡ್ಡಿ, ಪಲ್ಲೇದ, ಸಾತಿಹಾಳ, ಗಡಾದ, ಹೂಗಾರ,ಕೋಟಿ, ಸವದತ್ತಿ, ಮೆಣಸಿನಕಾಯಿ, ಜಿಗಜಿನ್ನಿ, ಎಳ್ಳೂರ, ಎಲಿಗಾರ, ಅರಳಿ ( ಗುಂಡಾನವರ) ಕಟಗಿ, ಮುನವಳ್ಳಿ, ಪಟ್ಟೇದ, ಕುಂಬಾರ, ಹಡಪದ, ಮುಂತಾದ ಭಕ್ತಿಸಂಪನ್ನ ಶರಣ ಮನೆತನಗಳಲ್ಲಿ ಹೆಗಡಾಳ ಮನೆತನವೂ ಒಂದಾಗಿದೆ.

**ಹೆಗಡಾಳ ಮನೆತನವು** ಸತ್ಯ ಶುದ್ಧ ಕಾಯಕ, ನಿತ್ಯ ಲಿಂಗಾರ್ಚನೆ, ಭಕ್ತಿಯ ದಾಸೋಹ, ಪ್ರಸಾದ ಸಂತೃಪ್ತಿಯ **ಲಿಂಗಾಯತ ಮನೆತನ**ವಾಗಿದ್ದು, ಲಿಂಗಾಯತ ಸಮಾಜದ ಎಲ್ಲ ಗುರು-ಹಿರಿಯರ ಪ್ರೀತಿ-ಗೌರವಗಳಿಗೆ ಪಾತ್ರವಾಗಿರುವ ಮನೆತನವಾಗಿದೆ.

**೨. ನರಗುಂದ ಹೆಗಡಾಳ ಮನೆತನದ ವಂಶಾವಳಿ :**




೧. **ಶಿವನಾಗಪ್ಪ** ಬಿ.ಎ.,ಎಲ್‌ಎಲ್.ಬಿ. (ಸ್ಪೇಶಲ್) **(ಪೂಜ್ಯ ಶ್ರೀ ಗುರುಮಹಾಂತ ಸ್ವಾಮಿಗಳು)**

೨. **ಶಿವಯೋಗಿ** ಎಂ.ಕಾಂ.,ಎಲ್‌ಎಲ್.ಬಿ. (ಸ್ಪೇಶಲ್)

೩. **ಶಿವಶಂಕರಮ್ಮ** ಪಿ.ಯು.ಸಿ.

೪. **ರೇವಣಸಿದ್ದಪ್ಪ** ಎಂ.ಕಾಂ.,ಪಿಎಚ್.ಡಿ.

೫. **ಶಂಭುಲಿಂಗಪ್ಪ** ಎಂ.ಕಾಂ.,ಎಲ್‌ಎಲ್.ಬಿ. (ಸ್ಪೇಶಲ್)ಪಿಎಚ್.ಡಿ.

ನರಗುಂದದ ಬಸವಭಕ್ತಿ ಸಂಪನ್ನ ಲಿಂಗಾಯತ ಧರ್ಮದ ಶರಣ ಮನೆತನಗಳಲ್ಲಿ ಒಂದಾಗಿರುವ ಶ್ರೀ ಹೆಗಡಾಳ ಮನೆತನದ ಅಜ್ಜ ಸಿದ್ದಪ್ಪ ಹಾಗೂ ಅಜ್ಜಿ ಗುರುಸಿದ್ದಮ್ಮನವರು ಶರಣ ದಂಪತಿಗಳಾಗಿದ್ದರು. ಇವರು ಲಿಂಗಪೂಜಾನಿಷ್ಠರು. ಗುರುಲಿಂಗ ಜಂಗಮ ಪ್ರೇಮಿಗಳಾಗಿದ್ದರು. ಇವರಿಗೆ ವೀರಪ್ಪ, ಶಿವಗಂಗಮ್ಮ ಗೌರಮ್ಮ ಪಾರ್ವತಿ, ಸಂಗಪ್ಪ ಎಂದು ಐವರು ಮಕ್ಕಳು ಜನಿಸಿದರು. ಶ್ರೀ ಗುರುಸಿದ್ದಪ್ಪನವರದು ಅವಿಭಕ್ತ ಕುಟುಂಬವಾಗಿತ್ತು. ಕೃಷಿ-ವ್ಯಾಪಾರ ಕಾಯಕದೊಂದಿಗೆ ಪ್ರತಿದಿನ ಊರಿನ ದೇವಸ್ಥಾನ-

ಮಠಗಳಿಗೆ ಭಕ್ತಿಯಿಂದ ನಡೆದುಕೊಳ್ಳುತ್ತಿದ್ದರು.

ಶ್ರೀ ಸಿದ್ದಪ್ಪನವರ ಹಿರಿಯ ಮಗ ಶ್ರೀ ವೀರಪ್ಪನವರು ಸಹ ತಂದೆ-ತಾಯಿಯವರ ಧಾರ್ಮಿಕ ವಾತಾವರಣದಲ್ಲಿಯೇ ಬೆಳೆದು ಬಂದರು. ಕಲಬುರ್ಗಿಯಲ್ಲಿರುವ ಶ್ರೀ ಗದ್ದುಗೆಮಠ ಹಾಗೂ ಹುಬ್ಬಳ್ಳಿಯಲ್ಲಿರುವ ಕಲಬುರ್ಗಿ ಮಠಗಳ ಹಿರಿಯ ಪೂಜ್ಯರಾಗಿದ್ದ ಶ್ರೀ ಮ.ನಿ.ಪ್ರ. ಚರಲಿಂಗಸ್ವಾಮಿಗಳವರ ಹಾಗೂ ಪೂಜ್ಯ ಶ್ರೀ ಮ.ನಿ.ಪ್ರ ಶಿವಮೂರ್ತಿ ಸ್ವಾಮಿಗಳವರ ಪರಮಭಕ್ತರಾಗಿದ್ದರು. ಇದಲ್ಲದೇ ಊರಿನಲ್ಲಿರುವ ಶ್ರೀ ಚೆನ್ನಬಸವೇಶ್ವರ ವಿರಕ್ತಮಠ, ಶ್ರೀ ಪತ್ರಿಮಠ, ಶ್ರೀ ಪಂಚಗೃಹ ಹಿರೇಮಠ, ಶ್ರೀ ಪತ್ರಿವನ ಮಠಗಳಿಗೆ ಭಕ್ತಿ-ಶ್ರದ್ಧೆಯಿಂದ ನಡೆದುಕೊಳ್ಳುತ್ತಿದ್ದರು.

ಶ್ರೀ ವೀರಪ್ಪನವರು ತಾರುಣ್ಯಕ್ಕೆ ಬಂದಾಗ, ಶ್ರೀ ಸಿದ್ದಪ್ಪನವರು ಗುಳೇದಗುಡ್ಡದ ಲಿಂಗಾಯತ ಮನೆತನದ ಶರಣ ದಂಪತಿಗಳಾದ ಶ್ರೀ ಚೆನ್ನಸಂಗಪ್ಪ ಸಿಂದಗಿ ಹಾಗೂ ಶ್ರೀಮತಿ ಮಲ್ಲಮ್ಮ ಇವರ ಮಗಳಾದ ಚಿ॥ ಶಾಂತಮ್ಮಳನ್ನು ತಮ್ಮ ಮಗ ಚಿ॥ ವೀರಪ್ಪನವರಿಗೆ ತಂದುಕೊಂಡು ೧೯೫೫ನೇ ಇಸ್ವಿ ಬಸವ ಜಯಂತಿಯ ದಿನ ಕಲ್ಯಾಣ ವಿವಾಹ ಮಾಡಿದರು. ಶ್ರೀ ವೀರಪ್ಪನವರು ಹಾಗೂ ಶ್ರೀಮತಿ ಶಾಂತಮ್ಮನವರು ಹುಬ್ಬಳ್ಳಿಯಲ್ಲಿರುವ ಕಲಬುರ್ಗಿ ಮಠದ ಪೂಜ್ಯಶ್ರೀ ಶಿವಮೂರ್ತಿಸ್ವಾಮಿಗಳವರಿಂದ ಇಷ್ಟಲಿಂಗ ದೀಕ್ಷೆ ಅನುಗ್ರಹ ಪಡೆದುಕೊಂಡರು. ಆ ಕಾಲದಲ್ಲಿ ತುಂಬಾ ಆಚಾರವಂತ ಶರಣರೆಂದು ಸಮಾಜ ಗೌರವಿಸುತ್ತಿತ್ತು. ನರಗುಂದದಲ್ಲಿ ಕಾಟನ್ ಮಿಲ್‌ಗಳಿದ್ದುದ-ರಿಂದ ಶ್ರೀ ವೀರಪ್ಪನವರು **ಅರಳೆ ವ್ಯಾಪಾರ ಕಾಯಕ** ಕೈಕೊಂಡರು. ಸತ್ಯ ಶುದ್ಧ ಕಾಯಕ, ದಿನಾಲುಎರಡು ಹೊತ್ತು ಸ್ನಾನ ಇಷ್ಟಲಿಂಗ ಪೂಜೆ, ಗುರುಕರುಣ ತ್ರಿವಿಧಿ ಪಠಣ, ಶೂನ್ಯ ಸಂಪಾದನೆಯ ವಚನಗಳ ಪಾರಾಯಣ, ಪ್ರಸಾದ ಸಂತೃಪ್ತಿಯ ಜೀವನ ಇವರದಾಗಿತ್ತು. ಗುರು ಲಿಂಗ ಜಂಗಮ ಪ್ರೇಮಿಗಳಾಗಿದ್ದರಿಂದ ನರಗುಂದಕ್ಕೆ ದಯಮಾಡಿಸುವ ಪೂಜ್ಯರನ್ನು ಮನೆಗೆ ಬಿನ್ನಹ ಮಾಡಿ, ಅವರ ಅರ್ಚನೆ-ಅರ್ಪಣ-ಅನುಭಾವಕ್ಕೆ ವ್ಯವಸ್ಥೆ ಮಾಡುತ್ತಿದ್ದರು. ಪಾದೋದಕ-ಪ್ರಸಾದ ಜೀವಿಗಳಾಗಿದ್ದರು.

**೩. ಗುರುಮಹಾಂತ ಸ್ವಾಮಿಗಳ ಜನನ-ನಾಮಕರಣ :**

ಶರಣ ದಂಪತಿಗಳಾದ ಶ್ರೀ ವೀರಪ್ಪನವರು ಹಾಗೂ ಶ್ರೀಮತಿ ಶಾಂತಮ್ಮನವರ ಚಿದ್‌ಗರ್ಭದಲ್ಲಿ ದಿನಾಂಕ **೨೭-೦೫-೧೯೬೦** ಬಸವಜಯಂತಿಯಂದು ಶುಕ್ರವಾರ ರಾತ್ರಿ ೧೨-೦೦ ಗಂಟೆಗೆ ತಾಯಿಯ ತವರು ಮನೆ ಗುಳೇದುಗುಡ್ಡದಲ್ಲಿ ಗಂಡು ಮಗುವಿನ ಜನನವಾಯಿತು (ಈ ಮಗುವೇ ಪೂಜ್ಯಶ್ರೀ ಗುರುಮಹಾಂತ ಸ್ವಾಮಿಗಳು)

ತಾಯಿ ಶಾಂತಮ್ಮನವರು ಗರ್ಭಿಣಿ ಇದ್ದಾಗ, ಈ ದಂಪತಿಗಳು ಊರಿನ ಮಠದಲ್ಲಿ ನಡೆಯುತ್ತಿದ್ದ ಬಸವ ಪುರಾಣ ಪ್ರವಚನ ಕೇಳುತ್ತಿದ್ದರು. ಅದರಲ್ಲಿ ಬರುವ **ಶರಣ ಹೊಲೆಯರ ಶಿವನಾಗಿದೇವ** (ಶಿವನಾಗಮಯ್ಯ)ನವರ ಮನೆಗೆ ಗುರು ಬಸವಣ್ಣನವರು ಪ್ರಸಾದಕ್ಕೆ ಹೋಗಿ ಬಂದು ಪ್ರಸಂಗ, ಬಿಜ್ಜಳನ ಆಸ್ಥಾನದಲ್ಲಿ ಕೊಂಡಿ ಮಂಚಣ್ಣ, ನಾರಾಯಣಕ್ರಮಿತ, ಮುಕುಂದ ಭಟ್ಟರಿಂದ ಪರೀಕ್ಷೆ ಶರಣನ ಬೆರಳಿನಿಂದ ಹಾಲು ಸುರಿದ ಘಟನೆ ಪವಾಡ ಸದೃಶ ಪ್ರಸಂಗ ಕೇಳಿ ಈ ದಂಪತಿಗಳು ಪ್ರಭಾವಿತರಾಗಿದ್ದರು. ಶಿವಭಕ್ತ ಶಿವನಾಗಮಯ್ಯನ ಭಕ್ತಿ ಮನಸ್ಸಿನ ಮೇಲೆ ಗಾಢವಾದ ಪರಿಣಾಮ ಉಂಟು ಮಾಡಿತ್ತು. ಇದರ ಪರಿಣಾಮ-ಫಲಸ್ವರೂಪವಾಗಿ ಜನಿಸಿದ ಗಂಡು ಶಿಶುವಿಗೆ **"ಶಿವನಾಗಪ್ಪ"** ಎಂದು ತೊಟ್ಟಲಲ್ಲಿ ಹಾಕಿ ನಾಮಕರಣ ನೆರವೇರಿಸಿದರು. ಗುಳೇದಗುಡ್ಡದ ಕೋಟೆಕಲ್ಲ ಶ್ರೀ ಹುಚ್ಚೇಶ್ವರ ಮಠದ ಪೂಜ್ಯರು ಬಂದು ಆಶೀರ್ವಾದ ಮಾಡಿದರು.

**೪. ಬಸವಣ್ಣನ ಸೇವೆಗೆ ಜನಿಸಿದ್ದೀಯಪ್ಪಾ :**

ಮಗು ಶಿವನಾಗಪ್ಪನಿಗೆ ನಾಲ್ಕು ತಿಂಳು ತುಂಬಿ ಐದನೇ ತಿಂಗಳಿಗೆ ಕಾಲಿಟ್ಟಾಗ ತಾಯಿ-ಮಗುವನ್ನು ಗುಳೇದಗುಡ್ಡದಿಂದ ನರಗುಂದಕ್ಕೆ ಕರೆದುಕೊಂಡು ಬಂದರು. ತವರು ಮನೆಯ ತೊಟ್ಟಿಲು-ಬಟ್ಟಲೊಂದಿಗೆ ಬಂದು ತಾಯಿ-ಮಗುವನ್ನು ನರಗುಂದದ ಕೆಂಪಗಸಿಯ ಚಿನಿವಾಲಗಟ್ಟಿ ಓಣಿಯಲ್ಲಿರುವ ಬಸವೇಶ್ವರ ದೇವಾಲಯದಲ್ಲಿ ಕೂಡಿಸಿದರು. ದೇವಸ್ಥಾನದ ಹತ್ತಿರವೇ ಹೆಗಡಾಳ ಅವರ ಮನೆ ಇದೆ. ಅಂದು ಸೋಮವಾರದ ದಿನ. ದೇವಸ್ಥಾನದಲ್ಲಿ ಭಜನೆ-ಪ್ರಾರ್ಥನೆ ನಡೆದಿತ್ತು. ಪೂಜೆ-ಮಂಗಳಾರತಿ ನಂತರ ತಾಯಿ-ಮಗುವನ್ನು ಮನೆಗೆ ಕರೆದೊಯ್ಯುವ ಸಂಪ್ರದಾಯ ಅಲ್ಲಿಯ ಓಣಿಯ ಲಿಂಗಾಯತರಲ್ಲಿತ್ತು.

ಅದೇ ಸಮಯಕ್ಕೆ ನರಗುಂದದ ಬಸವಭಕ್ತ ಶರಣ **ಸಾತಿಹಾಳ ಹುಚ್ಚಪ್ಪಜ್ಜ** ಓಣಿಯಲ್ಲಿ ಆವೇಶದಿಂದ ಓಡುತ್ತಾ ಬಸವೇಶ್ವರ ದೇವಸ್ಥಾನಕ್ಕೆ ಬಂದು, ತಾಯಿಯ ಮಡಿಲಲ್ಲಿ ಭಸ್ಮಧರಿಸಿಕೊಂಡು ಕುಳಿತಿದ್ದ ಐದು ತಿಂಗಳ ಕೂಸನ್ನು ಎತ್ತಿ ತಲೆಯ ಮೇಲೆ ಕೂಡಿಸಿಕೊಂಡು ಆನಂದದಿಂದ "ನನ್ನ ಸೇವೆ ಮಾಡಾಕ ಜನಿಸಿದ್ದೀಯಪ್ಪಾ ಅಂದರೆ **ಬಸವಣ್ಣನ ಸೇವೆಗೆ ಜನಿಸಿ ಬಂದಿದೀಯಪ್ಪಾ**" ಎಂದು ಕುಣಿಯತೊಡಗಿದ. ಹುಚ್ಚಪ್ಪಜ್ಜನ ಮೈಯಲ್ಲಿ ಆಗಾಗ ಬಸವಣ್ಣ ದೇವರು ಬರುತ್ತಿದ್ದ ಎಂದು ಹಿರಿಯರು ಹೇಳುತ್ತಿದ್ದರು. ಆವೇಶ ಇಳಿದು ಮಗುವಿಗೆ ಮುದ್ದು ಮಾಡಿ, ಮತ್ತೆ ತಾಯಿಯ

ಮಡಿಲಿಗೆ ಒಪ್ಪಿಸಿದನಂತೆ. (ಈ ಘಟನೆಯನ್ನು ನರಗುಂದದ ಬಸವಣ್ಣ ದೇವರ ಗುಡಿ ಹತ್ತಿರದ ಮನೆತನಗಳ ಹಿರಿಯ ಅಜ್ಜ-ಅಜ್ಜಿಗಳು ಇಂದಿಗೂ ಹೇಳುತ್ತಾರೆ)

ಸಾತಿಹಾಳ ಹುಚ್ಚಪ್ಪಜ್ಜ ಹಾಗೂ ಮಹಾಂತಮ್ಮ ಶರಣ ದಂಪತಿಗಳು ನರಗುಂದದ ಶರಣ ಬಂಧುಗಳಿಗೆಲ್ಲ ಆ ಕಾಲದಲ್ಲಿ ಚಿರಪರಿಚಿತರು. ವಿಜಾಪುರ ಜಿಲ್ಲೆಯಿಂದ ಬಂದು ನರಗುಂದದದಲ್ಲಿ ಕಾಯಕ ಜೀವನ ನಡೆಸುವ ಶರಣರಾಗಿದ್ದರು. ಹೆಗಡಾಳ ಮನೆತನದವರಿಗೆಲ್ಲ ಆತ್ಮೀಯ ಶರಣ ಬಂಧುವಾಗಿದ್ದವರು.

**೫. ಶಿವನಾಗು ಅಪ್ಪಾ, ಜೀವನಾಗಬೇಡ :**

ಗುಳೇದಗುಡ್ಡದಿಂದ ನರಗುಂದಕ್ಕೆ ಬಂದ ನಂತರ, ಐದು ತಿಂಗಳ ಮಗುವಿಗೆ ಜವಳ ತೆಗೆಯಿಸಲು ಹೆಗಡಾಳ ಮನೆತನದ ಬಂಧು-ಬಳಗದವರು ಹುಬ್ಬಳ್ಳಿಯಲ್ಲಿರುವ ಕಲಬುರ್ಗಿ ಮಠಕ್ಕೆ ಬಂದರು. ತಮ್ಮ ಮನೆತನದ ಗುರುಗಳಾದ ಪೂಜ್ಯ ಶ್ರೀ ಮ.ನಿ.ಪ್ರ. ಶಿವಮೂರ್ತಿ ಸ್ವಾಮಿಗಳವರ ಜಂಗಮ ಪಾದಕ್ಕೆ ಶರಣೆಂದು, ಪೂಜ್ಯರ ಲಿಂಗಹಸ್ತಗಳಿಗೆ ಮಗುವನ್ನು ಕೊಟ್ಟರು. ಮಗುವನ್ನು ಎರಡೂ ಹಸ್ತಗಳಲ್ಲಿ ತೆಗೆದುಕೊಂಡ ಪೂಜ್ಯರು - 'ಮಗುವಿಗೆ ಏನು ಹೆಸರು ಇಟ್ಟಿದ್ದೀರಿ' ಎಂದು ಶ್ರೀ ವೀರಪ್ಪನವರಿಗೆ- ಶ್ರೀಮತಿ ಶಾಂತಮ್ಮನವರಿಗೆ ಕೇಳಿದರು. ಆಗ ದಂಪತಿಗಳು- ಬುದ್ಧಿ, ಶಿವನಾಗಪ್ಪ ಎಂದು ನಾಮಕರಣ ಮಾಡೀವಿ ಎಂದರು. ಪೂಜ್ಯರು ಮಗುವಿನ ಹಣೆಗೆ ಬಸವಾ ಬಸವಾ ಎನ್ನುತ್ತಾ ವಿಭೂತಿ ಧರಿಸಿ- **"ನೀನು ಶಿವನಾಗು ಅಪ್ಪಾ, ಜೀವನಾಗ ಬೇಡ"** ನೀನು ಶಿವನಾಗು ಅಪ್ಪಾ, ಜೀವನಾಗ ಬೇಡ, ನೀನು ಶಿವನಾಗು ಅಪ್ಪಾ, ಜೀವನಾಗಬೇಡ'' ಎಂದು ಮೂರು ಸಲ ಗುರುಲಿಂಗವಾಣಿಯಿಂದ ಭಾವಪರವಶವಾಗಿ ನುಡಿದರು. ತಂದೆ-ತಾಯಿ, ಬಂಧು ಬಳಗದವರೆಲ್ಲ ಭಕ್ತಿಭಾವದಿಂದ ರೋಮಾಂಚಿತರಾದರು. ಪೂಜ್ಯ ಗುರುಗಳ ಅಂಗೈ ತೊಟ್ಟಿಲಲ್ಲಿ **'ಶಿವ ಶಿಶು'** ಮುಗುಳ್ನಗುತ್ತಿತ್ತು. ಇದೊಂದು ದೈವೀ ಘಟನೆ, ಲಿಂಗಯ್ಯನ ಲೀಲೆ ಎಂದೆನ್ನಬಹುದು.

**೬. ಶಿವ ಶಿಶುವಿನ ಬಾಲ್ಯ ಜೀವನ :**

ತಂದೆ ವೀರಪ್ಪನವರದು ಅಪ್ಪಟ ಶರಣ ಜೀವನ, ಬೆಳಿಗ್ಗೆ ಸ್ನಾನ ಪೂಜೆ-ಪ್ರಸಾದ ಸ್ವೀಕರಿಸಿ ಕಾಯಕಕ್ಕೆ (ಅರಳಿ ವ್ಯಾಪಾರ) ಹೋದರೆ, ತಮ್ಮ ಜೊತೆಗೆ ವಿಭೂತಿ, ರುದ್ರಾಕ್ಷಿ ಪತ್ರಿ-ಪುಷ್ಪ, ಎಡೆಬಟ್ಟಲು ತೆಗೆದುಕೊಂಡು ಹೋಗುತ್ತಿದ್ದರು. ಯಾವುದೇ ಊರಿಗೆ ಹೋದರೂ ಅಲ್ಲಿ ಲಿಂಗಾಯತ ಮಠಗಳನ್ನು ಹುಡುಕಿಕೊಂಡು ಹೋಗಿ, ಅಲ್ಲಿ ಸ್ನಾನ-

ಪೂಜೆ-ಪ್ರಸಾದ ಸ್ವೀಕರಿಸುತ್ತಿದ್ದರು. ಯಾವುದೇ ಹೊಟೇಲುಗಳಲ್ಲಿ ಚಹಾ, ನೀರು ಸಹ ಕುಡಿಯುತ್ತಿರಲಿಲ್ಲ. ವ್ಯಾಪಾರ ಮುಗಿಸಿ ಮನೆಗೆ ಬಂದು ಮತ್ತೆ ಸ್ನಾನ-ಪೂಜೆ-ಪ್ರಸಾದ ಮಾಡುತ್ತಿದ್ದರು. ಇಂತಹ ಕಟ್ಟುನಿಟ್ಟಿನ "ಪಂಚಾಚಾರ" ಆಚರಣೆಯವರಾಗಿದ್ದರು.

**ಹೆಗಡಾಳ ಅವರದು ದೊಡ್ಡಮನೆ,** ಮನೆಯ ಪಡಸಾಲೆಯಲ್ಲಿ, ಪೂಜಾ ಕೋಣೆಯಲ್ಲಿ ಬಸವಾದಿ ಶರಣರ, ಶಿವಯೋಗಿಗಗಳ, ಮಹಾತ್ಮರ ಫೋಟೋ ಮಾತ್ರ ಹಾಕಿದ್ದರು. ತಮ್ಮ ಮನೆತನದ ಯಾವ ಹಿರಿಯರ ಫೋಟೋಗಳನ್ನು ಹಾಕಿಸಿಗೊಡುತ್ತಿರಲಿಲ್ಲ. ಶರಣ, ಶಿವಯೋಗಿಗಳ ಭಾವಚಿತ್ರಗಳನ್ನು ಮಕ್ಕಳಿಗೆ ತೋರಿಸಿ, ಅವರ ಹೆಸರು ಹೇಳಿ, ಸಾಧನೆ ವಿವರಿಸುತ್ತಿದ್ದರು. ಅಥಣಿ ಶಿವಯೋಗಿಗಳು, ಇಳಕಲ್ಲ ವಿಜಯಮಹಾಂತ ಶಿವಯೋಗಿಗಳು, ಬಾಲಲೀಲಾ ಮಹಾಂತ ಶಿವಯೋಗಿಗಗಳು, ಹಾನಗಲ್ಲ ಕುಮಾರಸ್ವಾಮಿಗಳು, ಎಡೆಯೂರು ಸಿದ್ಧಲಿಂಗೇಶ್ವರರು, ಘನಮಠ ಶಿವಯೋಗಿಗಳು, ಬಸವಣ್ಣನವರು, ಅಕ್ಕಮಹಾದೇವಿ ಮುಂತಾದ ಮಹಾತ್ಮರ ಫೋಟೋಗಳು- ಇವುಗಳನ್ನು ನೋಡಿ ಮಗು-ಹಾಲ್ ಅಜ್ಜ, ಆಕ್ಕಲ್ಲ್ ಅಜ್ಜ, ಬೂ ಅಜ್ಜ ಎಂದು ತೊದಲ್ನುಡಿಯಿಂದ ಹೇಳುವುದನ್ನು ಕೇಳಿ ತಂದೆ-ತಾಯಿ ಆನಂದ ಪಡುತ್ತಿದ್ದರು. ಚಿಕ್ಕ ಮಗುವಿದ್ದಾಗಿನಿಂದಲೂ ಎಂದಿಗೂ ಹಟ, ಸಿಟ್ಟು, ಸಿಡುಕು ಮಾಡಿದುದೇ ಇಲ್ಲ.

**ಬಾಲ ಶಿವಯೋಗಿ :**

ನಾಲ್ಕು ವರ್ಷದ ಮಗುವಿದ್ದಾಗ ಒಂದು ದಿನ ಬೆಳಿಗ್ಗೆ ಪೂಜಾ ಕೋಣೆಯಲ್ಲಿ ಹೋಗಿ ಕುಳಿತು, ಮೈತುಂಬಾ ರುದ್ರಾಕ್ಷಿ ಧರಿಸಿಕೊಂಡು, ಹಣೆ, ಮೈ, ಕೈ, ತೋಳು, ಪಾದಗಳಿಗೆಲ್ಲ ಭಸ್ಮಧರಿಸಿಕೊಂಡು ಅಂಗೈಯಲ್ಲಿ ಲಿಂಗ ಹಿಡಿದು ಪೂಜೆಯಲ್ಲಿ ತಲ್ಲೀನನಾಗಿ ಬಿಟ್ಟಿದ್ದ, ಜೋಡು ಗಂಟೆ ಬಾರಿಸುತ್ತಾ ಇದ್ದುದನ್ನು ಕೇಳಿ, ಓಣಿಯಲ್ಲಿ ಹಾದು ಹೋಗುತ್ತಿದ್ದ ಮಹಾಂತಮ್ಮಳು (ಹುಚ್ಚಪ್ಪಜ್ಜನ ಹೆಂಡತಿ) ಬಂದು ನೋಡಿ ಆಶ್ಚರ್ಯಪಟ್ಟಳು. ಮನೆಯವರನ್ನೆಲ್ಲ, ಓಣಿಯ ಹಿರಿಯರನ್ನೆಲ್ಲ ಕರೆದು ತೋರಿಸಿದಳಂತೆ. 'ಬೆಳೆಯ ಸಿರಿ ಮೊಳಕೆಯಲ್ಲೇ ಕಾಣು' ಎಂಬಂತೆ ಮಗುವಿನ ಬಾಲಲೀಲೆ ಭಕ್ತಿವಂತರಿಗೆ ಮಾತ್ರ ಅರ್ಥವಾದೀತು!

**೭. ಐದು - ಮತ್ತೊಂದು = ಆರು-ಮಕ್ಕಳು : ಭಕ್ತಿ ಸಂಬಂಧ :**

ಶರಣ ದಂಪತಿಗಳಾದ ವೀರಪ್ಪನವರು **ಹಾಗೂ ಶಾಂತಮ್ಮನವರಿಗೆ** ಶಿವನಾಗಪ್ಪ, ಶಿವಯೋಗಿ, ಶಿವಶಂಕರಮ್ಮ ರೇವಣಸಿದ್ಧಪ್ಪ, ಶಂಭುಲಿಗಪ್ಪ ಎಂದು ಐದು

ಜನ ಮಕ್ಕಳು ಜನಿಸಿದರು. ಈ ಮಕ್ಕಳ ಲಾಲನೆ-ಪಾಲನೆಯಲ್ಲಿ ಭಕ್ತಿವಂತರನ್ನಾಗಿ ಬೆಳೆಸುತ್ತಿದ್ದರು. ಇವರ ಆದರ್ಶ ಭಕ್ತಿಯುತ ಶರಣ ಜೀವನ ಅರಿತಂತಹ, ಮೂಲತಃ **ಹುನಗುಂದ ತಾಲೂಕಿನ ಸೂಳೇಭಾವಿಯವರಾದ,** ಹುಬ್ಬಳ್ಳಿಯಲ್ಲಿ ನೆಲೆಸಿದ್ದ ಜಂಗಮ ಮನೆತನದ ಶ್ರೀ ಶಿವಪುತ್ರಯ್ಯ ಲೂತಿಮಠ ಹಾಗೂ ಶ್ರೀಮತಿ ರಾಜೇಶ್ವರಿ ದಂಪತಿಗಳು (ಹುಬ್ಬಳ್ಳಿಯ ಕಲಬುರ್ಗಿ ಮಠದ ಪೂಜ್ಯರ ಭಕ್ತಿ ಸಂಬಂಧದ ಪರಿಚಯದಿಂದ) ತಮ್ಮ ಮಗು ಚಿ|| ಸಂತೋಷ ಲೂತಿಮಠ ಈತನನ್ನು ನರಗುಂದಕ್ಕೆ ತಂದು ಹೆಗಡಾಳ ಮನೆಯಲ್ಲಿ ತಂದು ಬಿಟ್ಟರು. ಹುಬ್ಬಳ್ಳಿಯಲ್ಲಿ ಮಗ ಉಡಾಳ ಆಗಬಾರದು ಎಂದು, ಒಳ್ಳೆಯ ಶರಣ ಸಂಸ್ಕಾರದಲ್ಲಿ ಬೆಳೆಯಲಿ ಎಂದು, ಒಪ್ಪಿಸಿ ಹೋದರು. ಹೀಗೆ ಐದು ಮಕ್ಕಳೊಂದಿಗೆ **ಆರನೆಯ ಮಗ ಸಂತೋಷ** ಇವರ ಮನೆಯ ಮಗನಾಗಿಯೇ ಬೆಳೆದ. ಐದೂ ಜನ ಸೋದರ-ಸೋದರಿಯರು ಇಂದಿಗೂ ಕೂಡ- ಸಂತೋಷವನ್ನು ತಮ್ಮ **'ಚಿಕ್ಕ ತಮ್ಮ'** ಸಣ್ಣ ತಮ್ಮ younger brother ಎಂದೇ ಪರಿಚಯಿಸುತ್ತಾರೆ. (ಈಗ ಸಂತೋಷ ಲೂತಿಮಠ ಬಾಲ್ಯದಿಂದ ಇವರ ಮನೆಯ ಮಗನಾಗಿ ಓದಿ, ಎಂ.ಎ.ಎಂ.ಲಿಬ್. ಸಾಯನ್ಸ್ ಓದಿ, ಎಂ.ಬಿ.ಎ. ಕಾಲೇಜಿನಲ್ಲಿ ಗ್ರಂಥಪಾಲಕರಾಗಿ ಕಾಯಕದಲ್ಲಿದ್ದಾರೆ) ಈ ಕೊನೆಯ ತಮ್ಮನನ್ನು ಹಿರಿಯ ಅಣ್ಣ ಶಿವನಾಗಪ್ಪ ಹೆಗಲಮೇಲೆ, ಬೆನ್ನ ಮೇಲೆ ಕೂಡಿಸಿಕೊಂಡು ಆಟವಾಡಿಸಿದ್ದನ್ನು, ಅಪ್ಪಿ, ಅಪ್ಪಿ ಎಂದು ಪ್ರೀತಿ-ವಾತ್ಸಲ್ಯ-ದಿಂದ ಉಣಿಸಿ, ತಿನಿಸಿ, ರಮಿಸಿದ್ದನ್ನು **ಶ್ರೀ ಸಂತೋಷ ಲೂತಿಮಠ** ಅವರು ಕೃತಜ್ಞತೆ-ಯಿಂದ ಇಂದಿಗೂ ಸ್ಮರಿಸುತ್ತಾರೆ. ಈ ಭಕ್ತಿ ಸಂಬಂಧ ಕಂಡು ಬೆರಗಾಗಿದ್ದೇನೆ.

ಇಂತಹ ವಿಶಾಲ ಹೃದಯದ ಸದ್ಭಕ್ತ ಶರಣ ದಂಪತಿಗಳ ಉದರದಲ್ಲಿ ಜನಿಸಿ ಬಂದ, ಪಾಲನೆಗೊಂಡ ಈ ಆರು ಮಕ್ಕಳೇ ಪುಣ್ಯವಂತರು ! ಭಾಗ್ಯವಂತರು !!

### ೮. ನರಗುಂದದಲ್ಲಿ ಶಿಕ್ಷಣ-ವಿದ್ಯಾರ್ಥಿ ಜೀವನ-ಸಾಧನೆ :

ಬಾಲಕ ಶಿವನಾಗಪ್ಪ ನರಗುಂದದ ಸರಕಾರಿ ಕನ್ನಡ ಗಂಡು ಮಕ್ಕಳ ೨ನೇ ನಂಬರ ಶಾಲೆಯಲ್ಲಿ ಪ್ರಾಥಮಿಕ ೧ ರಿಂದ ೪ನೇ ವರ್ಗದವರೆಗೆ ಓದಿದರು. ಆಗ ಶ್ರೀ ಹೊಸಮನಿ, ಶ್ರೀ ನಾಗನೂರ ಶಿಕ್ಷಕರ ಪ್ರಭಾವ. ಅನಂತರ ಮುನ್ಸಿಪಲ್ ಹೈಸ್ಕೂಲ್‌ನಲ್ಲಿ ೫ ರಿಂದ ೧೧ನೇ ವರ್ಗದ ವರೆಗೆ ಓದಿದರು. ಅಲ್ಲಿ ಶ್ರೀ ಕಲಹಾಳ, ಶ್ರೀ ಹೂಗಾರ, ಶ್ರೀ ಪಾಟೀಲ, ಶ್ರೀ ಚುಳಕಿ, ಶ್ರೀಸೊಪ್ಪಿನ, ಶ್ರೀ ಪಟ್ಟಣಶೆಟ್ಟಿ, ಶ್ರೀ ಎನ್. ಜಿ. ಹಿರೇಮಠ, ಶ್ರೀ ಡಿ. ಎಚ್. ಕುಲಕರ್ಣಿ ಗುರುಗಳಾಗಿದ್ದರು. ಎಸ್.ಎಸ್.ಎಲ್.ಸಿ. ೧೯೭೬ ರಲ್ಲಿ ಪಾಸಾಗಿ, ಪುರಸಭೆಯ ಶ್ರೀ ಸಿದ್ಧೇಶ್ವರ ಕಾಲೇಜಿನಲ್ಲಿ ಪಿ.ಯು.ಸಿ. ಯಿಂದ

ಬಿ.ಎ. ವರೆಗೆ ಓದಿದರು. ಪಿ.ಯು.ಸಿ. ಯಲ್ಲಿ ಕನ್ನಡ, ಇಂಗ್ಲೀಷ, ಇತಿಹಾಸ, ಅರ್ಥಶಾಸ್ತ್ರ ರಾಜ್ಯಶಾಸ್ತ್ರ, ಸಮಾಜಶಾಸ್ತ್ರ, ಅಧ್ಯಯನ ಮಾಡಿದರು. ಬಿ.ಎ. ದಲ್ಲಿ ರಾಜ್ಯಶಾಸ್ತ್ರ ಪ್ರಧಾನ ವಿಷಯ: ಇತಿಹಾಸ ಹಾಗೂ ಸಮಾಜಶಾಸ್ತ್ರ ಉಪಪ್ರಧಾನ ವಿಷಯಗಳಾಗಿ, ಕನ್ನಡ ಮತ್ತು ಇಂಗ್ಲೀಷ ಬೇಸಿಕ್ ವಿಷಯಗಳಾಗಿ ಕಲಿತರು. ಬಿ.ಎ. ಇಂಗ್ಲೀಷ ಮಾಧ್ಯಮದಲ್ಲಿ ಓದಿ ೧೯೮೧ ರಲ್ಲಿ ಕಾಲೇಜಿಗೆ ಪ್ರಥಮರಾಗಿ ಪಾಸಾದರು. ಕಾಲೇಜಿನಲ್ಲಿ ಪ್ರಿ. ಜಿ. ಬಿ. ಚೌಕಿಮಠ, ಪ್ರೊ. ಸಿ. ಎಸ್. ಸಾಲೋಟಗಿಮಠ, ಡಾ. ಬಿ. ಎಂ. ಜಾಬಣ್ಣವರ, ಪ್ರೊ. ಬಿರಾದಾರ, ಪ್ರೊ. ಮೊಖಾಶಿ, ಪ್ರೊ. ಎಸ್. ಬಿ. ಕುಷ್ಟಗಿ, ಪ್ರೊ. ಬಿ. ಎಸ್. ಹಣಜಿ, ಡಾ. ಎಸ್. ಬಿ. ಹಿರೇಮಠ, ಗ್ರಂಥಪಾಲಕ ಶ್ರೀ ಜಿ. ಎನ್. ಸಾಲಿ, ಪ್ರೊ. ಮೋಟಗಿ, ಪ್ರೊ. ಎನ್. ಎಂ. ಮುಲ್ಲಾ ಮುಂತಾದವರು ತಜ್ಞ ಪ್ರಾಧ್ಯಾಪಕರಾಗಿದ್ದರು. ಅವರೆಲ್ಲರ ಅಚ್ಚುಮೆಚ್ಚಿನ ಸಾದಾ-ಸೀದಾ, ವಿನಯವಂತ, ನೀತಿವಂತ ಜಾಣ ವಿದ್ಯಾರ್ಥಿ ಯಾಗಿದ್ದರು.

**೯. ಬಾಲ್ಯದ-ವಿದ್ಯಾರ್ಥಿ ಜೀವನದ (ನರಗುಂದದ) ಘಟನೆಗಳು :**

ನರಗುಂದದ ಮನೆಯಲ್ಲಿ ಅಜ್ಜ-ಅಜ್ಜಿ, ತಂದೆ-ತಾಯಿ, ಚಿಕ್ಕಪ್ಪ, ಸಹೋದರರ-ಸಹೋದರಿಯರ ಒಡನಾಟದಲ್ಲಿ ಬೆಳೆದ ಹಿರಿಯ ಮಗ **ಶಿವನಾಗಪ್ಪ**, ಸುಸಂಸ್ಕೃತ ಪರಿಸರದಲ್ಲಿ, ಜವಾಬ್ದಾರಿಯುತ ಬಾಲಕ-ಯುವಕನಾಗಿ ಬೆಳೆದರು.

ಚಿಕ್ಕ ಮಗುವಾಗಿದ್ದಾಗಿನಿಂದಲೂ ಲಿಂಗಪೂಜೆ ಮಾಡಿಕೊಳ್ಳುವುದು, ಬೆಳಿಗ್ಗೆ ಪತ್ರಿವನ ಮಠಕ್ಕೆ ಹೋಗಿ ಪೂಜೆಗೆ ಹೂ-ಪತ್ರಿ ತರುವುದು. ಪ್ರತಿದಿನ ಚೆನ್ನಬಸಪ್ಪಜ್ಜನ ವಿರಕ್ತಮಠಕ್ಕೆ ಹೋಗಿ ಬರುವುದು. ಪ್ರತಿದಿನ ಮಠಕ್ಕೆ ಮಡಿಯಿಂದ ತಾಯಿಯವರು ಸಿದ್ಧಪಡಿಸಿದ ಎಡೆ ಒಯ್ದು ಕೊಟ್ಟು ಬರುವುದು. ಅನಂತರ ಮೈಲಾರ ಬಸವಲಿಂಗ ಶರಣರ ಗುರುಕರುಣ ತ್ರಿವಿಧಿ, ಬಸವಲಿಂಗ ನಾಮಾವಳಿ, ಸಿದ್ಧಲಿಂಗೇಶ್ವರ ನಾಮಾವಳಿ, ಅಥಣಿ ಶಿವಯೋಗಿಗಳ ನಾಮಾವಳಿ, ಕಲಬುರ್ಗಿ ಚರಲಿಂಗೇಶ್ವರ ನಾಮಾವಳಿ, ಇಳಕಲ್ಲ ವಿಜಯಮಹಾಂತ ಶಿವಯೋಗಿಗಳ ನಾಮಾವಳಿ, ಶಲವಡಿ ಗುರುಶಾಂತೇಶ್ವರ ನಾಮಾವಳಿ ಇತ್ಯಾದಿ ಹೇಳುವುದು. ಪ್ರತಿದಿನ ಬೆಳಿಗ್ಗೆ ೮ ರಿಂದ ೯ ವರೆಗೆ ಒಂದು ಪುಟ **'ಓಂ ಬಸವ'** ಎಂದು ಎಲ್ಲರೂ ಕಡ್ಡಾಯವಾಗಿ ಬರೆಯಲೇ ಬೇಕು. ಇದನ್ನು ಒಂದು ಕಲಿಯಿರಿ ಸಾಕು. 'ಬಸವ' ಎಂಬುದೇ ಮನೆತನದಲ್ಲಿ ಹಿರಿಯರಿಗೂ-ಕಿರಿಯರಿಗೂ ಬಾಳಿನ ಮಂತ್ರವಾಗಿತ್ತು.

ಬಸವಾ ಎಂಬ ಮೂರಕ್ಷರ ಹೃದಯದಲ್ಲಿ ನೆಲೆಗೊಂಡರೆ
ಅಸಾಧ್ಯ ಸಾಧ್ಯವಾಯಿತ್ತು, ಅಭೇದ್ಯ ಭೇದ್ಯವಾಯಿತ್ತು
ಇಂತಪ್ಪ ಬಸವಣ್ಣನಿಂದ ಲೋಕ ಲೌಕಿಕದಾಚರಣೆಯನತಿಗಳೆದು
ಭಕ್ತಿ ಭರವಪ್ಪುದು ಕಾಣಾ ಕೂಡಲಚನ್ನಸಂಗಮದೇವರಲ್ಲಿ.

ಎಂಬ ಚೆನ್ನಬಸವಣ್ಣನವರ ವಚನ ಸಂದೇಶವನ್ನು ಶರಣ ವೀರಪ್ಪನವರು ತಮ್ಮ ಮನೆಯಲ್ಲಿ ಆಚರಣೆಗೆ ತಂದಿದ್ದರು.

ಮನೆಯಲ್ಲಿ ಮಕ್ಕಳಿಗೆ ಜ್ವರ ಬಂದರೆ, ಬಸವಾ ಬಸವಾ ಎನ್ನುತ್ತಾ ಮೈಗೆಲ್ಲಾ ಭಸ್ಮ ಹಚ್ಚುತ್ತಿದ್ದರು. 'ಗುರು ಕರುಣ ತ್ರಿವಿಧಿ' ಪಾರಾಯಣ ಮಾಡುತ್ತಿದ್ದರು. ಶ್ರೀ ಗುರುವೇ ಕೃಪೆಯಾಗು ಎಂದು ಹೃದಯಾರೆ ಪ್ರಾರ್ಥಿಸುತ್ತಿದ್ದರು ಕ್ರಿಯಾ ಭಸ್ಮದ ಔಷಧೀಯ ಗುಣಗಳಿಂದ, ಬಸವ ಮಂತ್ರದ ಆತ್ಮಶಕ್ತಿಯಿಂದ ಗುಣವಾಗಿ ಬಿಡುತ್ತಿತ್ತು. ಇಷ್ಟೊಂದು ಅಚಲ ಶ್ರದ್ಧೆ-ನಿಷ್ಠೆ ತಂದೆ-ತಾಯಿಯರು ಬೆಳೆಸಿದ್ದರು.'

ಶಿವನಾಗಪ್ಪ ಚಿಕ್ಕ ಹುಡುಗನಾಗಿದ್ದಾಗ ಒಂದು ಸಲ ಚಿಕ್ಕಪ್ಪನೊಂದಿಗೆ ಮಾರ್ಕೆಟ್ಟಿಗೆ- ಅಂಗಡಿಗೆ ಹೋದಾಗ, ನೀರಡಕೆಆಯಿತು. ಚಿಕ್ಕಪ್ಪ ಅಲ್ಲಿಯೇ ಇದ್ದ ಚಹಾದ ಅಂಗಡಿಯಿಂದ ನೀರು ತಂದು-ಕುಡಿಯಲು ಬಾಲಕನಿಗೆ ಹೇಳಿದಾಗ- "ನಾನು ಚಹಾದ ಅಂಗಡಿ ನೀರು ಒಲ್ಲೆ, ಅಪ್ಪ ಚಹಾದಂಗಡಿಯೊಳಗಿನ ನೀರು ಕುಡಿಬ್ಯಾಡ ಅಂದಾನ' ಎಂದು ಹೇಳಿದರಂತೆ. ಇದನ್ನು ಮನೆಗೆ ಬಂದು- ಅಪ್ಪನ ಮುಂದೆ- 'ಅಪ್ಪಾ ನೀ ಹೇಳಿದ್ದಿಯಲ್ಲಾ, ಅದಕ್ಕ ನಾನು ಹೊರಗೆ ಚಹದಂಗಡ್ಯಾಗಿನ ನೀರು ಕುಡಿದಿಲ್ಲ' ಎಂದು ಹೇಳಿ ಮನೆಯೊಳಗೆ ಹೋಗಿ, ಕೈ ಕಾಲು ಮುಖ ತೊಳೆದು-ಕೊಂಡು, ಭಸ್ಮಧರಿಸಿಕೊಂಡು ನೀರು ಕುಡಿದರಂತೆ. ಇದು ಬಾಲ್ಯದಲ್ಲಿ ತಂದೆ-ತಾಯಿ ಹಾಕಿಕೊಟ್ಟ ಸಂಸ್ಕಾರ ! ಅವರ ಬಾಳಿನುದ್ದಕ್ಕೂ ಸಾಗಿ ಬಂದಿತು.

## ೧೦. ಸಮಯ ಪ್ರಜ್ಞೆ-ಕಾಯಕ ಪ್ರಜ್ಞೆ:

ಬಾಲಕ ಶಿವನಾಗಪ್ಪ ಹೈಸ್ಕೂಲು ಓದುತ್ತಿದ್ದಾಗ ಗೆಳೆಯರೊಂದಿಗೆ ಊರಿನ ನಗರೇಶ್ವರ ದೇವಾಲಯದ ರೂಮುಗಳಲ್ಲಿದ್ದು ಓದಲು ಹೋಗುತ್ತಿದ್ದರು. ಬೆಳಿಗ್ಗೆ ೫-೦೦ ಗಂಟೆಗೆ ತಮ್ಮ ಮನೆ ಇರುವ ಓಣಿಯಲ್ಲಿ ನಳದ ನೀರು ಬಿಡುತ್ತಿದ್ದರಂತೆ. ಇದನ್ನು ಅರಿತು, ಬೆಳಿಗ್ಗೆ ನಾಲ್ಕು ಗಂಟೆಗೆ ಎದ್ದು, ಅಭ್ಯಾಸ ಮಾಡಿ, ಸರಿಯಾಗಿ ೪-೫೫ ಕ್ಕೆ ಮನೆಗೆ ಬಂದು ಬಾಗಿಲು ಬಡಿದು ಎಬ್ಬಿಸಿ ಮನೆಯ ನಳದಿಂದ ನೀರು ತಂದು ತಂದು

ಮನೆಯೊಳಗಿನ ಹೌದು, ಟಾಕಿ, ಹರವಿ ತುಂಬುತ್ತಿದ್ದರು. ಇಷ್ಟೊಂದು ಜವಾಬ್ದಾರಿ, ಕಾಯಕ ನಿಷ್ಠೆ ಬಾಲ್ಯದಲ್ಲಿಯೇ ಅಳವಡಿಸಿಕೊಂಡಿದ್ದರು.

**೧೧. ಅರಿವು-ಆಚಾರದ ಸೂಕ್ಷ್ಮದೃಷ್ಟಿ :**

ಹೈಸ್ಕೂಲು ಓದುವಾಗಿನ ಒಂದು ಪ್ರಸಂಗ. ಅವರ ಗೆಳೆಯರ ಮನೆಗಳಲ್ಲಿ ಆ ಕಾಲದಲ್ಲಿ ರೇಡಿಯೋ ಬಂದಿದ್ದವು. ಅವರೆಲ್ಲರೂ ಆಕಾಶವಾಣಿಯ ವಾರ್ತೆಗಳನ್ನು ಕೇಳಿ ಶಾಲೆಗೆ ಬಂದು, ಚರ್ಚಿಸುತ್ತಿದ್ದರು. ಇವರಿಗೂ ರೇಡಿಯೋ ವಾರ್ತೆ ಕೇಳಬೇಕು ಎಂಬ ಹಂಬಲ ಉಂಟಾಗಿ, ಸಂಜೆ ಮನೆಗೆ ಬಂದು- ಅಪ್ಪಾ, ನನಗೂ ರೇಡಿಯೋ ಕೊಡಿಸಪ್ಪ ಎಂದು ಕೇಳಿದರು. ಆಗ ತಂದೆಯವರು- ರೇಡಿಯೋ, ನಮ್ಮ ಆಚಾರಕ್ಕೆ ಬರೋದಿಲ್ಲ ಬೇಡಪ್ಪಾ ಎಂದರು. ಬಾಲಕ ತಂದೆಯವರ ಮಾತಿಗೆ ತಲೆಹಾಕಿ ಸುಮ್ಮನಾದರು. ಒಂದು ದಿನ ಪಂಚಗೃಹ ಹಿರೇಮಠಕ್ಕೆ ಪೂಜ್ಯರ ದರ್ಶನಕ್ಕೆ ತಂದೆಯೊಂದಿಗೆ ಹೋದಾಗ, ಪೂಜ್ಯರು ತಮ್ಮ ರೂಮಿನಲ್ಲಿ ರೇಡಿಯೋ ವಾರ್ತೆ ಕೇಳುತ್ತಾ ಕುಳಿತಿದ್ದರು. ಇದನ್ನು ಕಂಡ ಬಾಲಕ ಮುಗ್ಧತೆಯಿಂದ - ಅಪ್ಪಾ, ರೇಡಿಯೋ ಆಚಾರಕ್ಕೆ ಬರ್ತದೋ ಹೆಂಗೆ? ಎಂದು ಕೇಳಿದರು. ಮಗನ ಅರಿವು-ಆಚಾರದ ಸೂಕ್ಷ್ಮದೃಷ್ಟಿ ಗಮನಿಸಿದ ತಂದೆ ವೀರಪ್ಪನವರು ಮಠದಿಂದ ನೇರವಾಗಿ ಮಾರ್ಕೆಟಿಗೆ ಹೋಗಿ ಒಂದು ರೇಡಿಯೋ ಖರೀದಿಸಿ ಮನೆಗೆ ತಂದರು. ಅಂದಿನಿಂದ ಎಲ್ಲರೂ ಆಕಾಶವಾಣಿ ವಾರ್ತೆ ಕೇಳಿ, ಜ್ಞಾನ ಗಳಿಸುವಂತಾಯಿತು.

**೧೨. ಬಾಲ್ಯದ ಹವ್ಯಾಸ ಗೋಲಿಗುಂಡ, ಚಿಣಿಪಣಿ ಆಟಗಳು :**

ಬಾಲ್ಯದಲ್ಲಿ 'ಗೆಳೆಯರೊಂದಿಗೆ ಆಟ ಆಡಲು ಹೋಗುತ್ತೇನೆ' ಎಂದು ತಂದೆಯವರಿಗೆ ಕೇಳುತ್ತಿದ್ದರು. ಅವರ ಅಪ್ಪಣೆಯಿಲ್ಲದೇ ಏನೂ ಮಾಡುತ್ತಿರಲಿಲ್ಲ. ಅಷ್ಟೊಂದು ವಿಧೇಯತೆ, ಪಿತೃಭಕ್ತಿ ಸಹಜವಾಗಿ ಅಳವಟ್ಟಿತ್ತು. ತಂದೆಯವರು ನೀನು ಆಟ ಆಡುವುದಾದರೆ ಗೋಲಿಗುಂಡ, ಚಿಣಿಪಣಿ ಆಟ, ಲಗೋರಿ ಆಟ ಆಡು ಎಂದು ಹೇಳಿದರಂತೆ, ಈ ಎಲ್ಲ ಆಟಗಳಲ್ಲಿ ಇವರಿಗೇನೇ ಗೆಲವು. ಆಟಕ್ಕೆ ಹೋದಾಗೊಮ್ಮೆ ಅಂಗಿಯ ಉಡಿತುಂಬ ಗುಂಡುಗಳನ್ನು ಗೆದ್ದು ತಂದು ಮನೆಯ ಹಿತ್ತಲಲ್ಲಿ ತಗ್ಗು ತೋಡಿ ಇಡುತ್ತಿದ್ದರಂತೆ. **ಗುಂಡಿನ ಆಟ ಆಡಿದರೆ ಗುರಿ ಇಡಲು ಸಾಧ್ಯ.** ಇದರಿಂದ ಇಷ್ಟಲಿಂಗ ಪೂಜೆಯ ಕಾಲಕ್ಕೆ ದೃಷ್ಟಿ ನಿಲ್ಲಿಸಲು ಸಾಧ್ಯ. 'ಆಲಿ ನಿಂದೊಡೆ ಸುಳಿದು ಸೂಸುವ ಗಾಳಿ ನಿಲುವುದು, ಗಾಳಿ ನಿಲುವೊಡೆ ಮನ ಮೇಲೆ ನಿಲುವುದು' ಎಂಬ ಲಿಂಗಯೋಗದ ಮಹತಿಯನ್ನು ತಂದೆಯವರು ಬಾಲ್ಯದಲ್ಲಿಯೇ ಕಲಿಸಿರುವುದು ತಿಳಿದು ಬರುತ್ತದೆ.

### ೧೩. ಪ್ರಾಮಾಣಿಕ ವಿದ್ಯಾರ್ಥಿ :

ಹೈಸ್ಕೂಲು ಓದುತ್ತಿರುವಾಗ ಪಾಠ ಹೇಳಿಸಿಕೊಳ್ಳಲು ಶ್ರೀ ಡಿ. ಎಚ್. ಕುಲಕರ್ಣಿ ಗುರುಗಳ ಮನೆಗೆ ಹೋಗುತ್ತಿದ್ದರು. ಇವರ ಸರಳತೆ, ಸೌಜನ್ಯ, ವಿಧೇಯತೆ, ಪ್ರಾಮಾಣಿಕತೆ ಅರಿತ ಆ ಬ್ರಾಹ್ಮಣ ಗುರುಗಳು ಇವರನ್ನು ತುಂಬಾ ಪ್ರೀತಿಯಿಂದ ಮನೆ ಪಾಠ ಹೇಳಿಕೊಡುತ್ತಿದ್ದರು. ಶ್ರೀ ಕುಲಕರ್ಣಿ ಗುರುಗಳು ಕುಟುಂಬ ಸಮೇತ ನಾಲ್ಕಾರು ದಿನ ಪರ ಊರುಗಳಿಗೆ, ಪ್ರವಾಸಕ್ಕೆ ಹೋಗಬೇಕಾದರೆ, ಇವರ ಮನೆಗೆ ಬಂದು ತಮ್ಮ ಮನೆಯ ಕೀಲಿ ಕೈ ಕೊಟ್ಟು, ನಾವು ಬರುವವರೆಗೆ ದಿನಾಲೂ ಮನೆಗೆ ಹೋಗಿ ರಾತ್ರಿ ಅಲ್ಲಿಯೇ ಇದ್ದು ಅಭ್ಯಾಸ ಮಾಡು, ಎಂದು ಹೇಳಿ ಅಲ್ಲಿಯೇ ಮಲಗಿಕೊಳ್ಳಲು ತಿಳಿಸುತ್ತಿದ್ದರು. ಇಷ್ಟೊಂದು ವಿಶ್ವಾಸ ಪಾತ್ರ ಪ್ರಾಮಾಣಿಕ ಶಿಷ್ಯ ಶಿವನಾಗಪ್ಪ ಆಗಿದ್ದರು.

### ೧೪. ಮನೆಯಲ್ಲಿ ಪ್ರತಿದಿನ ಶೂನ್ಯ ಸಂಪಾದನೆ ಪಠಣ :

ತಂದೆ ವೀರಪ್ಪನವರು, ತಮ್ಮ ಮಕ್ಕಳನ್ನೆಲ್ಲ ಕೂಡಿಸಿಕೊಂಡು ಭಕ್ತಿಯಿಂದ 'ಶೂನ್ಯ ಸಂಪಾದನೆ' ಗ್ರಂಥವನ್ನು ಪಠಣ ಮಾಡುತ್ತಿದ್ದರು. ಅದರಲ್ಲಿಯ ವಚನಗಳನ್ನು ಓದಿ ಹೇಳಿ, ಅರ್ಥ ವಿವರಿಸಿ, ಶಿವಾನುಭವ ಮಾಡುತ್ತಿದ್ದರು. ಅನಂತರ ಬಟ್ಟೆಯಲ್ಲಿ 'ಶೂನ್ಯ ಸಂಪಾದನೆ' ವಚನ ಗ್ರಂಥ ಸುತ್ತಿ, ಮನೆಯಲ್ಲಿಯ ಟ್ರೇಜರಿಯಲ್ಲಿ ಇಡುತ್ತಿದ್ದರು. ವಚನಗಳೇ ನಮ್ಮ ಸಂಪತ್ತು, ಅದುವೇ ನಮ್ಮ ಬಾಳಿನ ನಿಧಿ, ಇದನ್ನು ಜೋಪಾನ ಮಾಡಿರಿ ಎಂದು ಆಚರಣೆಯ ಮೂಲಕ ಎಲ್ಲ ಮಕ್ಕಳಿಗೆ ಆದರ್ಶವಾದ ಶರಣ ಮಾರ್ಗದರ್ಶನ ಮಾಡುತ್ತಿದ್ದರು.

### ೧೫. ಶಾಲೆ-ಕಾಲೇಜು ರಜಾ ದಿನಗಳಲ್ಲಿ ಮಠದಲ್ಲಿ ಗುರುಗಳ ಸೇವೆ :

ಶ್ರೀ ವೀರಪ್ಪನವರು ಮಕ್ಕಳನ್ನು ಬೇಸಿಗೆ ರಜೆ ಬಂದಾಗ ಹುಬ್ಬಳ್ಳಿಗೆ ಕಲಬುರ್ಗಿ ಮಠಕ್ಕೆ ಮೂರು ತಿಂಗಳು ಕಳಿಸುತ್ತಿದ್ದರು. ದಸರಾ ರಜೆ ಬಂದಾಗ ಕಲಬುರ್ಗಿಗೆ ಅಲ್ಲಿರುವ ಗದ್ದುಗೆ ಮಠಕ್ಕೆ ಒಂದು ತಿಂಗಳು ಕಳಿಸುತ್ತಿದ್ದರು. ಹೀಗೆ ವರ್ಷದ ಎರಡೂ ದೀರ್ಘಾವಧಿ ರಜೆಗಳಲ್ಲಿ ತಮ್ಮ ಎಲ್ಲ ಮಕ್ಕಳು ಮಠದಲ್ಲಿ ಪೂಜ್ಯ ಶ್ರೀ ಮ. ನಿ. ಪ್ರ. ಶಿವಮೂರ್ತಿ ಸ್ವಾಮಿಗಳ ಸಾನಿಧ್ಯದಲ್ಲಿದ್ದು ಮಠದಲ್ಲಿ ಕಸ ಗುಡಿಸುವುದು, ಬಟ್ಟೆ ತೊಳೆಯುವುದು, ಹೂ ಪತ್ರಿ ತರುವುದು, ಪ್ರಸಾದ ಸಿದ್ಧ ಪಡಿಸುವುದು, ಪ್ರಸಾದ ಎಡೆ ಮಾಡುವುದು ಮುಂತಾದ ಸೇವೆ ಸಲ್ಲಿಸುತ್ತಿದ್ದರು. ಬಿಡುವಿನ ಸಮಯದಲ್ಲಿ ಪೂಜ್ಯರೊಂದಿಗೆ ವಚನ ಚಿಂತನ, ಅನುಭಾವ ಓದಿನಲ್ಲಿ ತೊಡಗುತ್ತಿದ್ದರು. ರಜಾ

ದಿನಗಳಲ್ಲಿ ಮಕ್ಕಳು ವ್ಯರ್ಥವಾಗಿ ಸಮಯ ಹಾಳುಮಾಡ ಬಾರದೆಂಬ ಕಳಕಳಿ ತಂದೆ ವೀರಪ್ಪನವರಲ್ಲಿತ್ತು. ಹೀಗಾಗಿ ಎಲ್ಲಾ ಮಕ್ಕಳು ಉನ್ನತವಾದ ವಿದ್ಯೆಯೊಂದಿಗೆ ವಿನಯ, ಸೇವಾಭಾವನೆ, ಕಾಯಕ ಜೀವನ ಸಾಧಿಸುವಂತಾಯಿತು.

**೧೬. ಶಿಸ್ತು ಬದ್ಧ ವಿದ್ಯಾರ್ಥಿ ಜೀವನ :**

ಹೈಸ್ಕೂಲು ಶಿಕ್ಷಣದ ಕೊನೆಯ ಘಟ್ಟ ಎಸ್.ಎಸ್.ಎಲ್.ಸಿ. ಪರೀಕ್ಷೆ ಇದನ್ನು ಒಂದೇ ಸಲಕ್ಕೆ ಪಾಸಾಗಲೇ ಬೇಕೆಂಬ ಛಲ. ಶ್ರೀ ಡಿ. ಎಚ್. ಕುಲಕರ್ಣಿ ಸರ್ ಅವರು ಇವರಿಗೆ ಮನೆಯಲ್ಲಿ ಪಾಠ ಮಾಡಿ ಜಾಣರನ್ನಾಗಿಸಲು ಪ್ರಯತ್ನಿಸುತ್ತಿದ್ದರು. ಶಿವನಾಗಪ್ಪ ನದು ಶಿಸ್ತುಬದ್ಧ ಜೀವನ. ಮನೆಯಲ್ಲಿ ಹಿರಿಯ ಮಗನಾದುದರಿಂದ ಮನೆಯ ಎಲ್ಲ ಕೆಲಸ ಕಾರ್ಯಗಳ ಜವಾಬ್ದಾರಿ ನಿರ್ವಹಿಸುವದು, ತಂದೆಯವರು **ಅರಳಿ ವ್ಯಾಪಾರ ಕಾಯಕಕ್ಕೆ** ಹೋಗುತ್ತಿದ್ದುದರಿಂದ ತಾಯಿಯವರಿಗೆ ಸಹಾಯ, ಎಲ್ಲ ಸೋದರ-ಸೋದರಿಯರ ಕಾಳಜಿ, ಅವರನ್ನೂ ಸ್ಕೂಲಿಗೆ ಕಳಿಸುವ ಜವಾಬ್ದಾರಿ, ತಾನೂ ಸಿದ್ಧ ನಾಗಿ ಶಾಲೆಗೆ ಹೋಗುವುದು ಒಂದು ದಿನವೂ ಸ್ಕೂಲ್ ತಪ್ಪಿಸಿಲ್ಲ.

**೧೭. ಓಣಿಯಲ್ಲಿ ಕುಣಿಯುತ್ತಾ ಬಂದದ್ದು :**

ಎಸ್.ಎಸ್.ಎಲ್.ಸಿ. ಪರೀಕ್ಷೆ ಪ್ರಾಮಾಣಿಕವಾಗಿ ಬರೆದರು. ಜೀವನದಲ್ಲಿ ಎಂದಿಗೂ ನಕಲು (ಕಾಪಿ) ಮಾಡಲಿಲ್ಲ. ಪರೀಕ್ಷೆಯ ರಿಜಲ್ಟ ಬಂದಾಗ ಅಂದಿನ ರಾತ್ರಿಯೇ ಗುರುಗಳು- ಹೆಗಡಾಳ, ನೀನು ಪಾಸಾಗಿದ್ದಿ ಎಂದು ಹೇಳಿದರು. ತುಂಬಾ ಆನಂದವಾಯಿತು. ಶ್ರೀ ಕುಲಕರ್ಣಿ ಸರ್ ಮನೆಯಿಂದಲೇ ಕುಣಿಯುತ್ತಾ, ಎರಡೂ ಕೈ ಮೇಲೆತ್ತಿ, **ನಾನು ಪಾಸಾದೆ, ನಾನು ಪಾಸಾದೆ** ಎಂದು ಓಣಿಯಲ್ಲಿ ಎಲ್ಲರಿಗೂ ಹೇಳುತ್ತಾ ಓಡುತ್ತಾ ಬಂದು ತಂದೆ-ತಾಯಿ, ಅಜ್ಜ-ಅಜ್ಜಿ, ಓಣಿಯೊಳಗಿನ ಹಿರಿಯರಿಗೆಲ್ಲ ನಮಸ್ಕಾರ ಮಾಡಿದ್ದನ್ನು ಇಂದಿಗೂ ಅಲ್ಲಿಯ ಹಿರಿಯರು ಸ್ಮರಿಸುತ್ತಾರೆ.

**೧೮. ಕಾಲೇಜಿಗೆ ಪ್ರವೇಶ ಪಡೆದದ್ದು :**

ಎಸ್. ಎಸ್. ಎಲ್. ಸಿ. ವರೆಗೆ ಸಾಧಾರಣ ಬುದ್ಧಿಮತ್ತೆಯ ಹುಡುಗ, ಪಿ.ಯು.ಸಿ.ಗೆ ಬಂದ ನಂತರ ಬುದ್ಧಿಮತ್ತೆ, ಜಾಣತನ ಅದ್ಭುತವಾಗಿ ಬದಲಾಯಿತು. ಓದಿನಲ್ಲಿ ಏಕಾಗ್ರತೆ ಸಾಧಿಸಿತು. ಗ್ರಂಥಾಲಯದ ಬಹುತೇಕ ಉತ್ತಮ ಪುಸ್ತಕಗಳನ್ನೆಲ್ಲ ಓದಿದ್ದಾರೆ ಎಂದು ಅವರ ಗುರುಗಳು, ಸ್ನೇಹಿತರು ಇಂದಿಗೂ ನೆನಪಿಸಿಕೊಂಡು ಹೇಳುತ್ತಾರೆ. ಪಿ.ಯು.ಸಿ. ಯಿಂದ ಬಿ.ಎ. ವರೆಗಿನ ಐದು ವರ್ಷದ ಕಾಲೇಜು ಜೀವನ ಶಿವನಾಗಪ್ಪನವರ ಬಾಳಿನಲ್ಲಿ ಅತಿ ಮಹತ್ವದ ಘಟ್ಟವಾಯಿತು.

**೧೯. ಪ್ರಿನ್ಸಿಪಾಲ ಜಿ. ಬಿ. ಚೌಕಿಮಠರ ಪ್ರೀತಿಯ ಶರಣ :**

ನರಗುಂದದ ಮುನ್ಸಿಪಲ್ ಸಿದ್ಧೇಶ್ವರ ಪದವಿ ಕಾಲೇಜಿನ ಪ್ರಿನ್ಸಿಪಾಲ ಶ್ರೀ ಗುರುಲಿಂಗಯ್ಯ ಬಸಯ್ಯ ಚೌಕಿಮಠ ಅಪ್ಪಟ ಪ್ರಾಮಾಣಿಕ, ಶಿಸ್ತುಬದ್ಧ, ನ್ಯಾಯ ನಿಷ್ಠುರ ಒಳ್ಳೆಯ ದಕ್ಷ ಆಡಳಿತಗಾರರೆಂದೇ ಖ್ಯಾತಿ ಪಡೆದವರಾಗಿದ್ದರು. ಶಿವನಾಗಪ್ಪನವರ ವ್ಯಕ್ತಿತ್ವ ರೂಪು ತಾಳಲು ಕಾರಣರಾದ ಗುರುಗಳಲ್ಲಿ ಇವರೂ ಒಬ್ಬರು. ಶ್ರೀಯುತರ ಮನೆಗೆ ನಾನು (ಸಿಲಂ) ಈ ಗ್ರಂಥ ರಚನೆಯ ಕಾಲಕ್ಕೆ ವಿಷಯ ಸಂಗ್ರಹಕ್ಕೆ ಹೋದಾಗ (ನನ್ನೊಂದಿಗೆ ಪ್ರೊ. ಸಿ. ಎಸ್. ಸಾಲೋಟಗಿಮಠ, ಡಾ. ಶಂಭುಲಿಂಗಪ್ಪ, ಶ್ರೀ ಸಂತೋಷ ಲೂತಿಮಠ ಇದ್ದರು) ಅವರು ಹೇಳಿದ ಅನುಭವದ ನುಡಿಗಳನ್ನು ಕೇಳಿ ಮೂಕವಿಸ್ಮಿತನಾದೆ. ೮೫ ವರ್ಷಗಳ ವಯೋವೃದ್ಧ, ಅನುಭಾವ ವೃದ್ಧ ಶ್ರೀ ಜಿ. ಬಿ. ಚೌಕಿಮಠರ ನುಡಿಗಳು- "ನಮ್ಮ ಕಾಲೇಜಿಗೆ ಓದಲು ಬಂದ ಶಿವನಾಗಪ್ಪ ಹೆಗಡಾಳ- ನಿರಾಕಾರ, ನಿರ್ಗುಣ ಶರಣ ಸ್ವರೂಪವಾಗಿದ್ದ, ಇದ್ದೂ ಇಲ್ಲದಂತೆ ಇರ್ತಿದ್ದ ಹುಡುಗ, ಸಾದಾ ಸರಳ ಜೀವನ, ಖಾದಿ ಅಂಗಿ, ಪೈಜಾಮ, ಖಾದಿ ಟೊಪ್ಪಿಗೆ, ಸ್ವಚ್ಛ ಶುಭ್ರ ಡ್ರೆಸ್, ಬಿಳಿ ಬಟ್ಟೆಯಷ್ಟೇ ಸ್ವಚ್ಛ ಜೀವನ Innocent and silent worker. ತುಂಬಾ ಜಾಣ ವಿದ್ಯಾರ್ಥಿ, ಅಷ್ಟೇ ಪ್ರಾಮಾಣಿಕ ವಿದ್ಯಾರ್ಥಿ. ಒಮ್ಮೆ ಬಿ.ಎ. ಅಂತಿಮ ಪರೀಕ್ಷೆಗಳು ನಡೆದಾಗ ಯುನಿವ್ಹರ್ಸಿಟಿಯಿಂದ **ಪರೀಕ್ಷಾ ತನಿಖಾದಳ** (ಸ್ಕ್ವಾಡ್) ಬಂದಿತು. ವಿದ್ಯಾರ್ಥಿಗಳನ್ನು ಎಬ್ಬಿಸಿ ತಪಾಸಣೆ ಮಾಡುತ್ತಿದ್ದರು. ಶಿವನಾಗಪ್ಪ (ಗುರುಮಹಾಂತ ಸ್ವಾಮಿಗಳು) ಏಕಾಗ್ರ ಚಿತ್ತದಿಂದ ಉತ್ತರಪತ್ರಿಕೆ ಬರೆಯುತ್ತಿದ್ದ. ಯಾರತ್ತಲೂ ತಲೆ ಎತ್ತಿ ನೋಡುತ್ತಿರಲಿಲ್ಲ. ಆತನ ಹತ್ತಿರ ತಪಾಸಣೆಗೆ ತನಿಖಾ ದಳದವರು ಬಂದಾಗ, ನಾನು (ಜಿ. ಬಿ. ಚೌಕಿಮಠ) ಹೇಳಿದೆ- **"ನೋಡಿ ಈ ವಿದ್ಯಾರ್ಥಿ ಹತ್ತಿರ ಕಾಪಿ, ನಕಲಿನ ಚೀಟಿಗಳು ಸಿಕ್ಕರೆ ನಾನುನೌಕರಿಗೆ ರಾಜೀನಾಮೆ ಕೊಡ್ತೇನೆ"** ನನ್ನ ಮಾತು ಕೇಳಿ ಯುನಿವ್ಹರ್ಸಿಟಿ ತನಿಖಾದಳ ಆಶ್ಚರ್ಯ ಚಕಿತರಾದರು. ಮೂರು ತಾಸು ಸೂಕ್ಷ್ಮವಾಗಿ ಗಮನಿಸಿದರು. ಕೊನೆಗೆ ನನ್ನ ಕೋಣೆಗೆ ಬಂದು ಹೇಳಿದರು- **'ಇಂತಹ ಪ್ರಾಮಾಣಿಕ, ಏಕಾಗ್ರ ಚಿತ್ತದ ವಿದ್ಯಾರ್ಥಿಯನ್ನೇ ನಾವು ಕಂಡಿಲ್ಲ'** ಎಂದು! ಇದು ೧೯೬೧ ರಲ್ಲಿ ನಡೆದ ಘಟನೆ. ಪರೀಕ್ಷೆಯಲ್ಲಿ **ಕಾಲೇಜಿಗೆ ಪ್ರಥಮ ರ್‍ಯಾಂಕಿನಲ್ಲಿ** ಪಾಸಾದರು.

ಇದಾದ ನಂತರ ೨೫-೨೬ ವರುಷಗಳ ತರುವಾಯ ಈ ಹುಡುಗ ಶಿವನಾಗಪ್ಪ ಹೆಗಡಾಳ ಚಿತ್ತರಗಿ ಸಂಸ್ಥಾನಮಠ ಇಳಕಲ್ಲದ ೨೦ನೇ ಪೀಠಾಧೀಶರಾಗಿ ನರಗುಂದದ ಕಾರ್ಯಕ್ರಮಕ್ಕೆ ಹಿರಿಯ ಗುರುಗಳೊಂದಿಗೆ ಆಗಮಿಸಿ ನಮ್ಮ ಮನೆಗೆ ಬಂದಾಗ ಬಹಳ ಆನಂದವಾಯಿತು.

ಗೌರವದಿಂದ ಕೈಮುಗಿದೆ. ಅಷ್ಟರಲ್ಲಿ ಅವರೇ ನನ್ನ ಪಾದಕ್ಕೆ ಸಾಷ್ಟಾಂಗ ಹಾಕಿದರು. ಬಹಳ ದೊಡ್ಡ ವ್ಯಕ್ತಿ. ಅವರಲ್ಲಿ ತಂದೆ-ತಾಯಿಯರ ಶಕ್ತಿ, ಗುರು ಶಕ್ತಿ ಇದೆ. ನಮ್ಮ ಮನೆಗೆ ಸ್ವಾಮಿಯಾಗಿ ಬಂದಾಗ ಎಷ್ಟೇ ಒತ್ತಾಯ ಮಾಡಿದರೂ ಕುರ್ಚಿಯ ಮೇಲೆಕೂಡಲಿಲ್ಲ. ನಿಂತೇ ಇದ್ದರು. ಹಿರಿಯ ಗುರುಗಳು ಹೇಳಿದ ನಂತರ ಕುಳಿತರು. ಅಷ್ಟೊಂದು ವಿನಯ, ಕಿಂಕರ ಭಾವ. ನಾವು ದಕ್ಷಿಣೆ ನೀಡಲು ಹೋದಾಗ ತೆಗೆದು ಕೊಳ್ಳಲಿಲ್ಲ. **ನಿಜವಾದ ವೈರಾಗ್ಯ !** ವಿರಕ್ತಿಗೆ ಮಾದರಿ. ಇವರಿಂದ ಅಂದರೆ (ಗುರು ಮಹಾಂತ ಸ್ವಾಮಿಗಳಿಂದ) - **"ಹೆಗಡಾಳ ವಂಶ ಉದ್ಧಾರ, ನಮ್ಮ ಊರು ನರಗುಂದ ಉದ್ಧಾರ..."**

ವಯೋವೃದ್ಧ ಶ್ರೀ ಜಿ. ಬಿ. ಚೌಕಿಮಠ ಅವರ ನುಡಿಗಳನ್ನು ಕೇಳಿ ನಾವೆಲ್ಲ ಆನಂದಭಾಷ್ಪದೊಂದಿಗೆ ರೋಮಾಂಚನಗೊಂಡೆವು.

**೨೦. ದಿಲ್ಲಿಯ ಇಂಜಿನಿಯರ ಶ್ರೀಕಂಠ ಚೌಕಿಮಠ ಹೇಳಿದ್ದು :**

ಪ್ರಿ. ಜಿ. ಬಿ. ಚೌಕಿಮಠ ಅವರ ಪುತ್ರ ಶ್ರೀಕಂಠ ಎಂ.ಟೆಕ್. ಓದಿ ದಿಲ್ಲಿಯಲ್ಲಿ ಉನ್ನತ ಹುದ್ದೆಯ ಇಂಜಿನಿಯರ್ ಆಗಿದ್ದು, ಶ್ರೀ ಗುರುಮಹಾಂತ ಸ್ವಾಮಿಗಳ ಹಾಗೂ ಪೂರ್ವಾಶ್ರಮದ ಸಹೋದರ ರೇವಣಸಿದ್ಧಪ್ಪರ ಬಾಲ್ಯದ ಸ್ನೇಹಿತರಾಗಿದ್ದವರು. ಶ್ರೀ ಚೌಕಿಮಠರ ನರಗುಂದ ಮನೆಯಲ್ಲಿ ನಾವಿದ್ದಾಗ ದಿಲ್ಲಿಯಿಂದ ಅವರಿಂದ ಫೋನ್ ಬಂತು. ಫೋನಿನಲ್ಲಿ ಒಂದು ಘಟನೆ ಹೇಳಿದರು- "ಅಗಷ್ಟ ೧೫ರ ಸ್ವಾತಂತ್ರ್ಯೋತ್ಸವದ ದಿನ ಬೆಳಿಗ್ಗೆ ೬-೩೦ ಕ್ಕೆ ನಾನು (ಶ್ರೀಕಂಠ ಚೌಕಿಮಠ) ಶ್ರೀ ಹೆಗಡಾಳ ಅವರ ಮನೆಗೆ ನನ್ನ ಸ್ನೇಹಿತ ರೇವಣಸಿದ್ಧಪ್ಪನನ್ನು ಕರೆಯಲು ಹೋಗಿದ್ದೆ. ಆಗ ಅವರ ತಂದೆಯವರು ಶಿವನಾಗಪ್ಪನವರನ್ನು ಕೂಡಿಸಿಕೊಂಡು ಒಂದು ವಚನ ಹೇಳುತ್ತಿದ್ದರು.

ಉಳ್ಳವರು ಶಿವಾಲಯ ಮಾಡುವರಯ್ಯ
ನಾನೇನು ಮಾಡಲಿ ಬಡವನಯ್ಯ
ಎನ್ನ ಕಾಲೇ ಕಂಬ, ದೇಹವೇ ದೇಗುಲ
ಶಿರವೇ ಹೊನ್ನ ಕಳಸವಯ್ಯ
ಕೂಡಲಸಂಗಮದೇವ ಕೇಳಯ್ಯಾ
ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ

ಬಸವಣ್ಣನವರ ಈ ವಚನ, ಅದರ ಅನುಭಾವ ಕೇಳುತ್ತಾ ಅವರು ಮೈಮರೆತಿದ್ದರು. ನಾನು ಕುಳಿತು ಕೇಳಿದೆ. ಅದು ನನ್ನ ಮನಸ್ಸಿನ ಮೇಲೆ ಅಚ್ಚಳಿಯದೇ ಉಳಿದಿದೆ.

ಇಂತಹ ಭಕ್ತವಂತ ತಂದೆ-ಮಕ್ಕಳು ! ಅವರು. ಅವರಿಂದು ಇಳಕಲ್ಲ ಶ್ರೀಮಠದ ಪೂಜ್ಯ ಸ್ವಾಮಿಗಳಾಗಿರುವುದು ನಮಗೆಲ್ಲ ಹೆಮ್ಮೆ ಎನಿಸುತ್ತಿದೆ.

**೨೧. ಪ್ರೊ. ಚಂದ್ರಶೇಖರಯ್ಯ ಶಿವಯ್ಯ ಸಾಲೋಟಗಿಮಠರ ನೀತಿವಂತ ಶಿಷ್ಯ :**

ಅಂದಿನ 'ಶಿವನಾಗಪ್ಪ ಹೆಗಡಾಳ' (ಇಂದಿನ ಶ್ರೀ ಗುರುಮಹಾಂತ ಸ್ವಾಮಿಗಳು) ನನ್ನ ವಿದ್ಯಾರ್ಥಿ ಎಂಬುದು ನನಗೆ ಬಹಳ ಆನಂದ, ಅಭಿಮಾನವೆನಿಸುತ್ತದೆ. ಬಿ.ಎ. ದಲ್ಲಿ 'ರಾಜ್ಯಶಾಸ್ತ್ರ' ಮೇಜರ್ ತೆಗೆದುಕೊಂಡಿದ್ದರಿಂದ, ನಾನು ರಾಜ್ಯಶಾಸ್ತ್ರದ ಪ್ರಾಧ್ಯಾಪಕನಾದ್ದರಿಂದ ನೇರವಾಗಿ ನನಗೆ ಸಂಪರ್ಕ ನಿರಂತರವಾಗಿ ಬರ್ತಿತ್ತು. ಹಣೆಯ ಮೇಲೆ ವಿಭೂತಿ, ಸಾದಾ ಸರಳ ಜೀವನ. 'Simple living and High thinking' ಎಂಬುದಕ್ಕೆ ಉದಾಹರಣೆ, ನಿದರ್ಶನವಾಗಿದ್ದ ವಿದ್ಯಾರ್ಥಿ, ಕಾಲೇಜು ಜೀವನದಲ್ಲಿ ಯಾರೊಂದಿಗೂ ಜಗಳ ಮಾಡಿದವರಲ್ಲ-ಶಿಕ್ಷಕರ ಮೇಲೆ ಅಪಾರ ಗೌರವ, ಭಕ್ತಿ, ಶ್ರದ್ಧೆ ಇಟ್ಟುಕೊಂಡಿದ್ದರು. ಯಾವಾಗಲೂ ಬರಿಗಾಲಿನಿಂದ ಓಡಾಡುತ್ತಿದ್ದರು. ಭಕ್ತಿಭಾವ ತುಂಬಿತ್ತು. ಬಿ.ಎ. ಭಾಗ ೧ ರವರೆಗೆ ಕನ್ನಡ ಮಾಧ್ಯಮ ದಲ್ಲಿಓದಿ ಕಾಲೇಜಿಗೆ ಪ್ರಥಮ ಬರುತ್ತಿದ್ದ ಹುಡುಗ, ಬಿ.ಎ. ಭಾಗ-೨ ಹಾಗೂ ಭಾಗ-೩ ಕ್ಕೆ ಇಂಗ್ಲೀಷಮಾಧ್ಯಮದಲ್ಲಿ ಓದುವುದಾಗಿ ಹೇಳಿದಾಗ ಆಶ್ಚರ್ಯಪಟ್ಟಿದ್ದೆ. ಬಿ.ಎ. ದಲ್ಲಿ ಕಾಲೇಜಿಗೆ ಪ್ರಥಮ ರ್‍ಯಾಂಕಿನಲ್ಲಿಪಾಸಾಗಿ, ಸಾಧಿಸಿ ತೋರಿದ ಛಲವಂತರು.

ರಾಜ್ಯಶಾಸ್ತ್ರದಲ್ಲಿ ಸಾಕ್ರೇಟಿಸ್, ಪ್ಲೇಟೋ, ಅರಿಸ್ಟಾಟಲ್‌ರ ವಿಚಾರಗಳನ್ನು ಆಸಕ್ತಿಯಿಂದ ಓದಿ, ನಮ್ಮ ಮನೆಗೆ ಬಂದು ಚರ್ಚಿಸುತ್ತಿದ್ದರು. ಪ್ಲೇಟೋನ 'ದಿ ರಿಪಬ್ಲಿಕ್' ಗ್ರಂಥ ಇಂಗ್ಲೀಷಿನಲ್ಲಿ ಓದಿ ಅರಗಸಿಕೊಂಡಿದ್ದರು. 'Philosopher King' ಎಂಬ ವಿಚಾರ ಪರಿಣಾಮ ಬೀರಿತ್ತು. ಡಾ.ರಾಧಾಕೃಷ್ಣನ್ ರಾಷ್ಟ್ರಪತಿ ಆಗಿದ್ದರೆಂಬುದು ಇದಕ್ಕೆ ಉದಾಹರಣೆ ಎಂದು ಸಮರ್ಥಿಸುತ್ತಿದ್ದರು.

ಪಾಠಗಳಲ್ಲಿ ಎಷ್ಟು ಜಾಣ ಎನಿಸಿಕೊಂಡಿದ್ದರೋ, ಅಷ್ಟೇ ಆಟಗಳಲ್ಲಿಯೂ ಸಾಧನೆ ಮಾಡುವ ಛಲವಿತ್ತು, ಶ್ರೀ ಡಿ.ಕೆ. ಕುಲಕರ್ಣಿ ಅವರು ದೈಹಿಕ ಶಿಕ್ಷಕ (P.E.) ಗುರುಗಳಾಗಿದ್ದರು. ಕಾಲೇಜು ಟೀಮಿಗೆ ಕ್ರಿಕೆಟ್, ವ್ಹಾಲಿಬಾಲ್ ಟೀಮಿಗೆ ಆಯ್ಕೆ ನಡೆದಾಗ, ತಾನೂ ಅದಕ್ಕೆ ಸೇರಲು ಬಂದು ನಿಂತಿದ್ದರು. ಆಯ್ಕೆ ಆಗಲಿಲ್ಲ. ಆಗ ನಿರಾಶರಾಗದೇ **ಅಥೆಟಿಕ್ಸ್**ದಲ್ಲಿ ಸಾಧನೆ ಮಾಡಲು ನಿರ್ಧರಿಸಿದರು. ಓಟದ ಸ್ಪರ್ಧೆ ಇದು ಒಬ್ಬಂಟಿಯಾಗಿಓಡಿ ಗೆಲವು ಸಾಧಿಸುವ ಆಟವಾದುದರಿಂದ ಯಾರಿಗೂ ಹೇಳದೇ- ಪ್ರತಿದಿನ ಬೆಳಗ್ಗೆ ಒಂದು ಗಂಟೆ ಊರ ಹೊರಗಿನ ರಸ್ತೆಗಳಲ್ಲಿ ಓಟದ

ಪ್ರ್ಯಾಕ್ಟೀಸ್ ಸುರು ಮಾಡಿದರು. ಒಂದು ವರ್ಷ ಸಾಧನೆ ಮಾಡಿದರು. ಇದು ಯಾರಿಗೂ ಗೊತ್ತಿರಲಿಲ್ಲ.

ವಿಶ್ವವಿದ್ಯಾಲಯಕ್ಕೆ ಆಯ್ಕೆ ಮಾಡಲು ಕಾಲೇಜಿನಲ್ಲಿ ವಿದ್ಯಾರ್ಥಿಗಳ ಓಟದ ಸ್ಪರ್ಧೆ ಏರ್ಪಡಿಸಿದಾಗ, **ಬರಿಗಾಲ ಬಂಟ** ಶಿವನಾಗಪ್ಪ ಬಂದು ನಿಂತಾಗ ಎಲ್ಲ ಸ್ಪರ್ಧಾಳು ವಿದ್ಯಾರ್ಥಿಗಳು ಖೊಳ್ಳನೆ ನಕ್ಕರು. ಆದರೆ... ಸ್ಪರ್ಧೆ ಸುರುವಾಯ್ತು, ಚಿಗರೆ ಯಂತೆ ಓಡಿ ಎಲ್ಲರನ್ನೂ ಹಿಂದಿಕ್ಕಿ ಮೊದಲಿರಾಗಿ (ಫಸ್ಟ) ಬಂದು ಎಲ್ಲರೂ ಆಶ್ಚರ್ಯ ಗೊಳ್ಳುವಂತೆ ಮಾಡಿದರು. ೧೫೦೦ ಮೀಟರ್, ೫೦೦೦ ಮೀಟರ್, ೧೦,೦೦೦ ಮೀಟರ್ ಓಟದ ಸ್ಪರ್ಧೆಯಲ್ಲಿ ಕಾಲೇಜಿಗೆ ಪ್ರಥಮ ಬಂದು **ಅಥ್ಲೇಟಿಕ್ ಚಾಂಪಿಯನ್** ಆಗಿ ಹೊರ ಹೊಮ್ಮಿದರು.

**ಕಾಲೇಜಿನ ಚುನಾವಣೆಗಳು-** ಆ ಕಾಲದಲ್ಲಿ ಭಾರೀ ತುರುಸಿನಿಂದ ನಡೆಯು ತ್ತಿದ್ದವು. ವಿದ್ಯಾರ್ಥಿಗಳಲ್ಲಿ ಎರಡು ಪಂಗಡಗಳಾಗಿ ಚುನಾವಣೆಗೆ ನಿಲ್ಲುತ್ತಿದ್ದರು. ಎದುರಾಳಿ ಪಂಗಡದಲ್ಲಿ ಯುನಿಯನ್ ಸೆಕ್ರೆಟರಿ ಸ್ಥಾನದ ಒಬ್ಬರನ್ನು ಹೊರತುಪಡಿಸಿ ಎಲ್ಲರೂ ಗೆಲ್ಲುತ್ತಿದ್ದರು. ಇವರಿದ್ದ ಪಂಗಡದಲ್ಲಿ ಯುನಿಯನ್ ಸೆಕ್ರೆಟರಿ ಸ್ಥಾನಕ್ಕೆ ಇವರನ್ನು ಬಿಟ್ಟು ಎಲ್ಲರೂ ಸೋಲುತ್ತಿದ್ದರು. ಅಂದರೆ ಕಾಲೇಜಿನ ಯುನಿಯನ್ ಸೆಕ್ರೆಟರಿಯಾಗಿ ಯಾವಾಲೂ ಶಿವನಾಗಪ್ಪ ಹೆಗಡಾಳ ನಿರಂತರವಾಗಿ ಆರಿಸಿಬರುತ್ತಿದ್ದರು.

ಕಾಲೇಜಿನಲ್ಲಿ ಯಾವುದೇ ವಿಷಯದ ಚರ್ಚಾಕೂಟ, ಭಾಷಣ ಸ್ಪರ್ಧೆಗಳು ನಡೆದರೂ ಇವರೇ ಪ್ರಥಮ ಬರುತ್ತಿದ್ದರು. **ಹೆಗಡಾಳನ್ನ ಬಿಟ್ಟರ ಮತ್ಯಾರು ಫಸ್ಟ ಬರಾಕ ಸಾಧ್ಯ ಅದ !** ಎಂಬ ಮಾತು ಕಾಲೇಜನಲ್ಲಿ ಜನಜನಿತವಾಗಿತ್ತು. ಕಾಲೇಜಿನ 'ಎನ್.ಸಿ.ಸಿ.' ಗೂ ಆಯ್ಕೆಯಾಗಿದ್ದರು. ಎನ್.ಸಿ.ಸಿ. ಯಲ್ಲಿ 'ಸಿ' ಸರ್ಟಿಫಿಕೇಟ ಪರೀಕ್ಷೆಯನ್ನು 'ಎ' ಗ್ರೇಡಿನಲ್ಲಿ ಪಾಸಾಗಿದ್ದರು. **ಎನ್.ಸಿ.ಸಿ.ಯ ಅಂಡರ್ ಆಫೀಸರ್** ಆಗಿದ್ದರು. ಎನ್.ಸಿ.ಸಿ. ಗೆ ಪ್ರೊ. ಬಿ. ಎನ್. ಮಳಗಿಸರ್ ಮೇಜರ್ ಆಗಿದ್ದರು. ಎನ್.ಸಿ.ಸಿ.ಯಲ್ಲಿ ಉತ್ತಮ ಸಾಧನೆ ಗೈದು **ಹೈದರಾಬಾದಿನಲ್ಲಿ** ಜರುಗಿದ NCC-Army Attachment Camp ಗೆ ಇವರೊಬ್ಬರೇ ಆಯ್ಕೆಯಾಗಿ ೨೧ ದಿನ ಹೈದರಾಬಾದಿಗೆ ಹೋಗಿ ತರಬೇತಿ ಪಡೆದು ಬಂದು ಕಾಲೇಜಿನ ಕೀರ್ತಿಪತಾಕೆ ಹಾರಿಸಿದ್ದರು. ಇವರ ಈ ಸಾಧನೆಗೆ ಇವರು ಬಿ.ಎ. ಭಾಗ-೨ ರಲ್ಲಿ ಓದುವಾಗ ಭಾರತದ ಸೈನ್ಯದಲ್ಲಿ ಅಧಿಕಾರಿಯಾಗಿ ನೇರ ನೇಮಕಾತಿ ಆದೇಶ ಬಂದಿತ್ತು. ಆದರೆ, ತಂದೆಯವರ ಇಚ್ಛೆಯಂತೆ ತಮ್ಮ ಓದನ್ನು ಮುಂದುವರೆಸಿದರು. ನಂತರ ಇವರು ೧೯೬೪ ರಲ್ಲಿ

ಜಂಗಮ ದೀಕ್ಷೆ ಪಡೆದ ಸುದ್ಧಿ ತಿಳಿದ ಮೇಜರ್ ಬಿ. ಎನ್. ಮಳಗಿಯವರು **"ಸೈನಿಕನಾಗಬೇಕಾದನು ಸನ್ಯಾಸಿಯಾದ"** ಎಂಬ ಉದ್ಗಾರತೆಗೆದರು.

ಇಂತಹ ಜನರಲ್ ಚಾಂಪಿಯನ್ ಅಂದರೆ ಆಟ-ಪಾಠಗಳಲ್ಲಿ, ಗುಣ-ನಡತೆಯಲ್ಲಿ ಸಾಧನೆಗೈದ ಸುಶೀಲ, **ಸದುವಿನಯದ ಚಾರಿತ್ರ್ಯವಂತ ನಮ್ಮ ವಿದ್ಯಾರ್ಥಿ** ಶಿವನಾಗಪ್ಪ ಹೆಗಡಾಳ ಇವರು ಚಿತ್ತರಗಿ ಸಂಸ್ಥಾನಮಠ ಇಳಕಲ್ಲದ ಗುರುಮಹಾಂತ ಸ್ವಾಮಿಗಳಾಗಿ ನಮ್ಮ ಧರ್ಮ-ಸಮಾಜಕ್ಕೆ ಒಳ್ಳೆಯ ಕೀರ್ತಿತರುತ್ತಿರುವುದು ನಮಗೆಲ್ಲ ಅಭಿಮಾನವೆನಿಸಿದೆ.'' ಪ್ರೊ. ಚಂದ್ರಶೇಖರಯ್ಯ ಸಾಲೋಟಗಿಮಠ ಅವರ ಅಭಿಮಾನದ ನುಡಿಗಳನ್ನು ಆಲಿಸಿದ ನಾವೆಲ್ಲ ಧನ್ಯತೆಯನ್ನು ಅನುಭವಿಸಿದೆವು.

**೨೨. ಡಾ. ಬಿ. ಎಂ. ಜಾಬಣ್ಣವರ ಸ್ವದೇಶ ಪ್ರೇಮಿ ಶಿಷ್ಯ :**

ನರಗುಂದ ಕಾಲೇಜಿನ ನಿವೃತ್ತ ಪ್ರಾಧ್ಯಾಪಕ, ಶ್ರೀ ಗುರುಮಹಾಂತ ಸ್ವಾಮಿಗಳಿಗೆ ಕಾಲೇಜಿನಲ್ಲಿ ಇಂಗ್ಲೀಷ ಪಾಠ ಮಾಡಿದ ಇಂಗ್ಲೀಷ ಪ್ರೊಫೇಸರ್ ಈಗ ಬೆಂಗಳೂರ-ಲ್ಲಿದ್ದು, ಲೇಖನ ಬರೆದು ಕಳಿಸಿದ್ದಾರೆ. 'ನರಗುಂದದಲ್ಲಿ ಹೆಗಡಾಳ ಅವರ ಕುಟುಂಬ ಸಾತ್ವಿಕ ಜೀವನ ಸಾಗಿಸುವುದರ ಜೊತೆಗೆ ಆಧ್ಯಾತ್ಮಿಕ ಜೀವನ ಸಾಗಿಸುತ್ತಿದ್ದರು. ಪಿ.ಯು.ಸಿ. ಯಿಂದ ಬಿ.ಎ. ಅಂತಿಮವರೆಗೆ ಶಿವನಾಗಪ್ಪ (ಗುರುಮಹಾಂತ ಸ್ವಾಮಿಗಳು) ನನ್ನ ವಿದ್ಯಾರ್ಥಿಯಾಗಿದ್ದರು. ಎನ್.ಸಿ.ಸಿ.ಯಲ್ಲಿ ಮುಂದಿರುವಂತೆಯೇ **ಎನ್.ಎಸ್.ಎಸ್.** ಚಟುವಟಿಕೆ (ರಾಷ್ಟ್ರೀಯ ಸೇವಾ ಯೋಜನೆ) ಗಳಲ್ಲಿಯೂ ಮುಂಚೂಣಿಯಲ್ಲಿರುತ್ತಿದ್ದ. ನಾನು ಎನ್.ಎಸ್.ಎಸ್. ಆಫೀಸರ್ ಆಗಿ ಕಾರ್ಯ ನಿರ್ವಹಿಸುತ್ತಿದ್ದಾಗೆ ನನ್ನ ಎಲ್ಲಾ ಹತ್ತು ದಿನಗಳ ಹಳ್ಳಿಯಲ್ಲಿಯ ಎನ್.ಎಸ್.ಎಸ್. ಕ್ಯಾಂಪುಗಳಿಗೆ ಹಾಜರಾಗಿ ಶ್ರಮದಾನ, ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಉತ್ಸಕತೆ-ಯಿಂದ ಒಡನಾಡಿಗಳ ಜತೆ ಪಾಲ್ಗೊಳ್ಳುತ್ತಿದ್ದ.ಕಾಲೇಜಿನ ಎಲ್ಲ ವಿದ್ಯಾರ್ಥಿನಿಯರಿಗೆ ಅಕ್ಕರೆಯ ಅಣ್ಣನಾಗಿ, ಗೆಳೆಯರಿಗೆ ಪ್ರೀತಿಯ ಗೆಳೆಯನಾಗಿ, ಶಿಕ್ಷಕರಿಗೆ ಹೆಮ್ಮೆಯ ವಿದ್ಯಾರ್ಥಿಯಾಗಿದ್ದರು.

ನಮ್ಮ ಓಣಿಯಲ್ಲಿದ್ದ ಎಲ್ಲ ಜನರಿಗೆ 'ಪ್ರೀತಿಯ ಹೆಗಡಾಳ' ಸಂಭಾವಿತ ಪ್ರಾಣಿ, ಮುಗ್ಧ ಹುಡುಗ, ಚುರುಕು ಬುದ್ಧಿಯ ವಿದ್ಯಾರ್ಥಿ, ಚತುರ ಮಾತುಗಾರ, ಸಮಾಜ ಪ್ರಿಯ, ರಾಷ್ಟ್ರ ಪ್ರೇಮಿ, ಸ್ವದೇಶಿ ವಸ್ತುಗಳ ಪ್ರೇಮಿಯಾಗಿದ್ದ. ಈತನ ಸ್ವದೇಶಿ ಪ್ರೇಮವು ಈತನ ಉಡುಗೆ ತೊಡುಗೆಗಳಲ್ಲಿ ಎದ್ದು ಕಾಣುತ್ತಿತ್ತು.

ಮಾನವ ಕುಲದ ಕಲ್ಯಾಣಕ್ಕಾಗಿ, ಲೋಕದ ಏಳಿಗೆಗಾಗಿ ಸ್ವಾಮಿತ್ವದ ಜೀವನವನ್ನು ಸಾಗಿಸಲಿಕ್ಕೆ ಪಣತೊಟ್ಟು ತಂದೆ-ತಾಯಿಗಳನ್ನು ತೊರೆದು, ಬಂಧು-ಬಳಗವನ್ನು ಬಿಟ್ಟು ವಿರಕ್ತ ಜೀವಿಯ ಬದುಕನ್ನು ಮೆಚ್ಚಿಕೊಂಡಿದ್ದು ನಮ್ಮೆಲ್ಲರಿಗೂ ಹೆಮ್ಮೆಯನ್ನು ತಂದಿದೆ. **ಸ್ವಾಮಿತ್ವದ ಕಾಯಕ ಜೀವನಕ್ಕೆ - ದಾಸೋಹ ಜೀವನಕ್ಕೆ ಹೇಳಿ ಮಾಡಿಸಿದ ವ್ಯಕ್ತಿತ್ವ ಅವರದು.**

ನಮ್ಮ ಕಾಲೇಜು **ನ್ಯಾಕ್ ವ್ಯವಸ್ಥೆಗೆ** ಒಳಪಡುವ ಸಂದರ್ಭದಲ್ಲಿ ಸ್ವಾಮಿಯಾಗಿದ್ದರೂ ಕಾಲೇಜಿಗೆ ಬಂದು ನ್ಯಾಕ್ ಪಿಯರ್ ಕಮೀಟಿಗೆ ತಮ್ಮ ಅಭಿಪ್ರಾಯ ಸೂಚಿಸಿ **ಕಾಲೇಜಿಗೆ ಬಿ+ ಗ್ರೇಡು** ಬರುವುದರಲ್ಲಿ ಅವರದೂ ಪಾಲು ಇದೆ. ಅದನ್ನು ಮರೆಯುವಂತಿಲ್ಲ. ಆಗ ನಾನು ನ್ಯಾಕ್ ಕೋ-ಆರ್ಡಿನೇಟರ್ ಆಗಿದ್ದೆ. ನನ್ನ ಮಾತಿಗೆ ಗೌರವ ನೀಡಿ ಬಂದದ್ದನ್ನು ನೋಡಿದರೆ ಅದು ಅವರ ಗುರುಭಕ್ತಿಗೆ ಸಾಕ್ಷಿಯಾಗಿತ್ತು.

ಶ್ರೀ ಗುರುಮಹಾಂತ ಸ್ವಾಮಿಗಳು ಇಳಕಲ್ಲ ಮಠಕ್ಕೆ ಬಂದು **'ಘುಟದಿಂದ ಮಠ'** ಎನ್ನುವ ಉಕ್ತಿಯನ್ನು ನಿಜಗೊಳಿಸಿದ್ದಾರೆ. ಇವರು ಜ್ಞಾನದಾಸೋಹಿಯಾಗಿ, ಅನ್ನದಾಸೋಹಿಯಾಗಿ, ಶಿಕ್ಷಣ ದಾಸೋಹಿಯಾಗಿ ಇಳಕಲ್ಲ ಮಠದ, ಸವದಿ ಮಠದ ಕೀರ್ತಿಯನ್ನು ಇನ್ನೂ ಹೆಚ್ಚಿಸಲಿ ಎಂದು ಆಶಿಸುವೆ.''

[ಪ್ರೊ. ಡಾ. ಬಿ. ಎಂ. ಜಾಬಣ್ಣವರ ಅವರು ಓಲೆ ಬರೆದು ತಮ್ಮ ಅಭಿಪ್ರಾಯ ಅನುಭವಗಳನ್ನು ವ್ಯಕ್ತಗೊಳಿಸಿದ್ದಕ್ಕೆ ಅನಂತ ಕೃತಜ್ಞತೆಗಳು- ಸಿದ್ಧಣ್ಣ ಲಂಗೋಟಿ]

ಕಾಲೇಜಿನಲ್ಲಿ ಪ್ರೊ. ಎನ್. ಎಂ. ಮುಲ್ಲಾ, ಪ್ರೊ. ಮೊಖಾಶಿ, ಪ್ರೊ. ದತ್ತಾತ್ರೇಯ ಹರಿನಾರಾಯಣ ಪಾಟೀಲ, ಪ್ರೊ. ಶ್ರೀನಿವಾಸ ಕುಲಕರ್ಣಿ ಮುಂತಾದವರ ಪ್ರೀತಿಯ ಶಿಷ್ಯನಾಗಿ ಬೆಳೆದು ಬಂದರು.

ಬಿ. ಎ. ಪರೀಕ್ಷೆ ಪರಿಣಾಮ ಬಂದ ದಿನ, ರಾತ್ರಿಯೆಲ್ಲ ಬರಿಗಾಲಿನಿಂದ ನಡೆಯುತ್ತಾ ನರಗುಂದದಿಂದ-ಹುಬ್ಬಳ್ಳಿಗೆ ಹೋಗಿ ಕಲಬುರ್ಗಿ ಮಠದ ಪೂಜ್ಯ ಶ್ರೀ ಶಿವಮೂರ್ತಿ ಸ್ವಾಮಿಗಳ ಗದ್ದುಗೆ ದರ್ಶನ-ಆಶೀರ್ವಾದ ಪಡೆದರು.

### ೨೩. ನರಗುಂದದಿಂದ ಧಾರವಾಡಕ್ಕೆ - ಕಾನೂನು ವಿದ್ಯಾಭ್ಯಾಸಕ್ಕೆ :

ಜನ್ಮಸ್ಥಳವಾದ ನರಗುಂದದಲ್ಲಿ ಮುನ್ಸಿಪಲ್ ಶ್ರೀ ಸಿದ್ಧೇಶ್ವರ ಡಿಗ್ರಿ ಕಾಲೇಜಿನಿಂದ ಬಿ.ಎ. ಪರೀಕ್ಷೆಯನ್ನು ಉನ್ನತ ಶ್ರೇಣಿಯಲ್ಲಿ ಕಾಲೇಜಿಗೆ ಪ್ರಥಮರಾಗಿ ತೇರ್ಗಡೆ ಹೊಂದಿದಾಗ ಮನೆತನದ ಹಿರಿಯರು, ಕಾಲೇಜಿನ ಪ್ರಾಧ್ಯಾಪಕ ವರ್ಗ, ಬಂಧು-

ಬಳಗ, ಸ್ನೇಹಿತರೆಲ್ಲ ಶ್ರೀ ಶಿವನಾಗಪ್ಪನವರ ಸಾಧನೆಗೆ ತುಂಬಾ ಸಂತಸಪಟ್ಟರು.

ತಂದೆಯವರಾದ ಶ್ರೀ ವೀರಪ್ಪನವರು ತಮ್ಮ ಮಗ ಕಾನೂನು ವಿದ್ಯಾಭ್ಯಾಸ ಮಾಡಿ ವಕೀಲನಾಗಬೇಕೆಂಬ ಹಂಬಲವುಳ್ಳವರಾಗಿದ್ದರು. ತಂದೆಯವರ ಮಾತನ್ನು ಸದಾಕಾಲ ಶಿರಸಾವಹಿಸಿ ಪಾಲನೆ ಮಾಡುತ್ತ ಬಂದಿದ್ದ ಪಿತೃವಾಕ್ಯ ಪರಿಪಾಲನಾ ಮಗ ಚಿ॥ ಶಿವನಾಗಪ್ಪನವರು ತಂದೆಯವರ ಮಾತಿಗೆ ಮನ್ನಣೆ ಇತ್ತರು. ಜಿಲ್ಲಾ ಕೇಂದ್ರವಾದ ಧಾರವಾಡವು ವಿದ್ಯಾನಗರ, ಶಿಕ್ಷಣದ ಕೇಂದ್ರ ಸ್ಥಳ, ಕರ್ನಾಟಕ ಸಾಂಸ್ಕೃತಿಕ ರಾಜಧಾನಿಯೆಂದೇ ಪ್ರಖ್ಯಾತವಾಗಿತ್ತು.

ಧಾರವಾಡದಲ್ಲಿ **ಡಾ. ಡಿ. ಸಿ. ಪಾವಟೆ** ಅವರು ಕಟ್ಟಿ ಬೆಳೆಸಿದ ಕರ್ನಾಟಕ ವಿಶ್ವವಿದ್ಯಾಲಯ ಹಾಗೂ **ಪೂಜ್ಯಶ್ರೀ ಮೃತ್ಯುಂಜಯಪ್ಪಗಳು** ಕಟ್ಟಿ ಬೆಳೆಸಿದ ಮುರುಘಾಮಠ. ಇವು ಹೆಸರು ವಾಸಿಯಾದವುಗಳು. ಗುರು-ಲಿಂಗ-ಜಂಗಮ ಪ್ರೇಮಿಯಾಗಿದ್ದ ಶ್ರೀ ವೀರಪ್ಪನವರು ಹೆಗಡಾಳ ಇವರು ತಮ್ಮ ಮಗನು ಪೂಜ್ಯ ಶ್ರೀ ಮೃತ್ಯುಂಜಯಪ್ಪಗಳು ಸ್ಥಾಪಿಸಿದ್ದ ಶ್ರೀ ಮುರುಘಾಮಠದ ಪ್ರಸಾದ ನಿಲಯ-ದಲ್ಲಿದ್ದು, ಪೂಜ್ಯ ಶ್ರೀ ಮ.ನಿ.ಪ್ರ. ಮಹಾಂತ ಅಪ್ಪಗಳವರ ಕೃಪಾಶ್ರಯದಲ್ಲಿ ಸೇವೆ ಮಾಡುತ್ತಾ, ಕಾನೂನು ಶಿಕ್ಷಣ ಓದಲೇಬೇಕು ಎಂಬ ಹಂಬಲವುಳ್ಳವರಾಗಿ ಮಗನನ್ನು ಕರೆದು ಕೊಂಡು ಧಾರವಾಡ ಮುರುಘಾಮಠಕ್ಕೆ ೧೯೬೧ ಜೂನ್ ತಿಂಗಳಲ್ಲಿ ಬಂದರು.

ಧಾರವಾಡ ಮುರುಘಾಮಠವು ಬಸವತತ್ವ-ಸಿದ್ಧಾಂತ-ದರ್ಶನದ ಧಾರ್ಮಿಕ ಕೇಂದ್ರವಾಗಿದ್ದು, ಪರಮಪೂಜ್ಯ ಅಥಣಿ ಶಿವಯೋಗಿಗಳ ಸಾನಿಧ್ಯದಲ್ಲಿ 'ಅಪ್ಪ ಬಸವಣ್ಣ-ನವರ ವಚನ ಪಾರಾಯಣ ಮಾಡುತ್ತಾ, ಪೂಜ್ಯರ ಸೇವೆಗೈದು, ಪೂಜ್ಯ ಶ್ರೀ ಮ.ನಿ.ಪ್ರ. ಸಿದ್ಧಲಿಂಗಪ್ಪಗಳವರಿಂದ ನಿರಂಜನ ಜಂಗಮದೀಕ್ಷೆ ಹೊಂದಿದ ಪೂಜ್ಯ ಮೃತ್ಯುಂಜಯ ಅಪ್ಪಗಳು ಕಟ್ಟಿ ಬೆಳೆಸಿದ ಮಠವಿದು. ಪೂಜ್ಯರು ೧೯೧೬ ರಲ್ಲಿ ಶ್ರೀ ಮುರುಘಾಮಠಕ್ಕೆ ಆಗಮಿಸಿ, ೧೯೧೭ ರಲ್ಲಿ 'ಶ್ರೀ ಜಗದ್ಗುರು ಮುರುಘರಾಜೇಂದ್ರ ಉಚಿತ ಪ್ರಸಾದ ನಿಲಯ' ಪ್ರಾರಂಭಿಸಿ ಲಿಂಗಾಯತ ಧರ್ಮ-ಸಮಾಜದ ಬಡ ಮಕ್ಕಳಿಗೆ ಪ್ರಸಾದ ಕರುಣಿಸಿದರು. ೧೯೨೬ ರಲ್ಲಿ ೬೩ ಕೋಣೆಗಳ ಪ್ರಸಾದ ನಿಲಯ ಕಟ್ಟಡ ಕಟ್ಟಿಸಿದರು. ಮುಂದೆ ಪಶುಪತಿಹಾಳದ ಶ್ರೀ ಮಹಾಂತ ದೇವರಿಗೆ ೧೯೩೩ ರಲ್ಲಿ ಅಥಣಿಯ ಪೂಜ್ಯ ಶ್ರೀ ಸಿದ್ಧಲಿಂಗಪ್ಪಗಳವರಿಂದಲೇ ನಿರಾಭಾರಿ ನಿರಂಜನ ಜಂಗಮ ಚರಪಟ್ಟಾಧಿಕಾರ ದೀಕ್ಷೆ ಕೊಡಿಸಿ 'ಶ್ರೀ ಮ.ನಿ.ಪ್ರ. ಮಹಾಂತಸ್ವಾಮಿಗಳು' ಎಂದು ನಾಮಕರಣ ಮಾಡಿಸಿದರು.

ಪೂಜ್ಯ ಮೃತ್ಯುಂಜಯಪ್ಪಗಳ ಕರುಣೆಯ ಮಾನಸಪುತ್ರರಾದ ಪೂಜ್ಯಶ್ರೀ ಮಹಾಂತಪ್ಪಗಳವರು ಶ್ರೀ ಮುರುಘಾಮಠದ ಜವಾಬ್ದಾರಿಯನ್ನು ಹೊತ್ತು ಮುನ್ನಡೆ-ಸಿಕೊಂಡು ಬಂದರು. ಪೂಜ್ಯ ಶ್ರೀ ಮೃತ್ಯುಂಜಯಪ್ಪಗಳು ೧೯೬೪ ರಲ್ಲಿ ಮಹಾಲಿಂಗ ದೊಳು ಬಯಲಾದ ನಂತರ, ಪೂಜ್ಯ ಶ್ರೀ ಮಹಾಂತಪ್ಪಗಳು ಶ್ರೀಮಠದ ಸಂಪೂರ್ಣ ಜವಾಬ್ದಾರಿ ಹೊತ್ತು, ಶಿವಯೋಗಿಗಳ ಕೃಪೆಯಿಂದ ಅದ್ಭುತವಾಗಿ ಮಠವನ್ನು ಬೆಳೆಸಿದರು. ಹಳೆಯ ಕರೆ ಹಂಚಿನ ಮಠ ತೆಗೆದು, ಇಂದಿನ ಹೊಸದಾದ ಮುರುಘಾ-ಮಠ ಕಟ್ಟಿ, ಗೋಪುರವನ್ನು ಕಟ್ಟಿಸಿದರು. ೬೩ ಇದ್ದ ಕೋಣೆಗಳ ಮೇಲೆ ಮತ್ತೆ ೬೩ ಕೋಣೆಗಳನ್ನು ಕಟ್ಟಿಸಿ, ಒಟ್ಟು ೧೨೬ ಕೋಣೆಗಳನ್ನು ಕಟ್ಟಿಸಿದರು. (೧೯೭೭ ರಲ್ಲಿ) ಇಂತಹ ಕತೃತ್ವ ಶಕ್ತಿಯ ಪೂಜ್ಯ ಮಹಾಂತಪ್ಪಗಳವರ ದರ್ಶನಕ್ಕೆ ಶ್ರೀ ವೀರಪ್ಪನವರು ತಮ್ಮ ಮಗ ಚಿ॥ ಶಿವನಾಗಪ್ಪನನ್ನು ಕರೆದುಕೊಂಡು ಬಂದರು. ಪೂಜ್ಯಶ್ರೀ ಮಹಾಂತ ಅಪ್ಪಗಳ ಕಾರುಣ್ಯ ದೃಷ್ಟಿಗೆ ಪಾತ್ರನಾದ ಯುವಕ ಚಿ॥ ಶಿವನಾಗಪ್ಪನಿಗೆ ಧಾರವಾಡ ಮುರುಘಾಮಠದ ಪ್ರಸಾದ ನಿಲಯದಲ್ಲಿ ಪ್ರವೇಶ ದೊರೆಯಿತು.

ಅನಂತರ ಕರ್ನಾಟಕ ವಿಶ್ವವಿದ್ಯಾಲಯದ ಯುನಿವ್ಹರ್ಸಿಟಿ ಲಾ ಕಾಲೇಜಿಗೆ ಪ್ರಥಮ ವರ್ಷದ ಎಲ್‌ಎಲ್.ಬಿ. ಗೆ ಪ್ರವೇಶ ದೊರಕಿತು. (೧೯೮೧)

**೨೪. ಲಾ ಕಾಲೇಜಿನಲ್ಲಿ 'ಶರಣ' ವಿದ್ಯಾರ್ಥಿ :**

ಕಾನೂನು ಮಹಾವಿದ್ಯಾಲಯದಲ್ಲಿ ಎಲ್‌ಎಲ್.ಬಿ. ಓದುವ ವಿದ್ಯಾರ್ಥಿ ಗಳೆಂದರೆ ಅವರ ಸ್ಟೈಲೇ ಬೇರೆ. ವಿದ್ಯಾರ್ಥಿ ಜೀವನದಲ್ಲಿಯೇ ಕೋಟು, ಪ್ಯಾಂಟು, ಶರ್ಟ, ಬೂಟು ಹಾಕಿಕೊಂಡು ಒಳ್ಳೆಯ ಗತ್ತಿನಿಂದ ಕಾಲೇಜಿಗೆ ಬರುವ ವಿದ್ಯಾರ್ಥಿ ಗಳಲ್ಲಿ ಖಾದಿ ಅಂಗಿ, ಪೈಜಾಮ, ಟೊಪ್ಪಿಗೆ ಹಾಕಿಕೊಂಡು ಹಣೆಯ ಮೇಲೆ ಥಾಳವಾಗಿ ಮೂರು ಬೆರಳು ವಿಭೂತಿ ಧರಿಸಿಕೊಂಡು ಬರುವ ಈ ಜಾಣ ವಿದ್ಯಾರ್ಥಿಯನ್ನು ಕಂಡು ಅವರ ಪ್ರಾಧ್ಯಾಪಕರೆಲ್ಲ ತುಂಬ ಆತ್ಮೀಯವಾಗಿ ಮಾತನಾಡಿಸುತ್ತಿದ್ದರು. ಶ್ರೀ ಆಯ್. ಜಿ. ಹಿರೇಗೌಡರ, ಪ್ರೊ. ಎಸ್. ಸಿ. ಹಿರೇಮಠ ಅವರಂತೂ 'ಶರಣ' ಎಂದೇ ಕರೆಯುತ್ತಿದ್ದರು. ಆಗ ಶ್ರೀ ಅಜ್ಜಪ್ಪ ಅವರು ಲಾ ಕಾಲೇಜಿನ ಪ್ರಾಚಾರ್ಯರಾಗಿದ್ದರು. ಶ್ರೀ ಎಸ್. ಸಿ. ಹಿರೇಮಠ, ಶ್ರೀ ರಾಮಚಂದ್ರರಾವ್, ಶ್ರೀ ಶೇಷಾದ್ರಿ, ಶ್ರೀ ಹೆಗಡೆ, ಶ್ರೀ ಏ. ಆರ್. ದೇಸಾಯಿ, ಶ್ರೀ ಆಲೂರ, ಶ್ರೀ ಸುಬ್ರಹ್ಮಣ್ಯ, ಶ್ರೀ ಹಿರೇಗೌಡರ, ಶ್ರೀ ಎಂ. ಸಿ. ಬಂಡಿ ಮುಂತಾದವರು ಪ್ರಾಧ್ಯಾಪಕರಾಗಿದ್ದರು. ಈ ಎಲ್ಲ ಗುರುಗಳ ಪ್ರೀತಿ ಪಾತ್ರ ವಿದ್ಯಾರ್ಥಿಯಾಗಿ, ಒಂದು ವಿಷಯವೂ ಫೇಲಾಗದೇ ಮೂರು ವರ್ಷ

ಎಲ್ಲ ವಿಷಯ ಗಳಲ್ಲಿ ಫಸ್ಟ್‌ಕ್ಲಾಸ್ ಅಂಕಗಳನ್ನು ಪಡೆಯುತ್ತಾ ಎಲ್‌ಎಲ್.ಬಿ. (ಸ್ಪೇಶಲ್) ಪಾಸಾಗಿ, ಕಾನೂನು ಪದವಿ ಗಳಿಸಿ ತಂದೆಯ ಇಚ್ಛೆಯನ್ನು ಪೂರೈಸಿದರು.

**೨೫. ಧಾರವಾಡ ಮುರುಘಾಮಠದ ಸಾತ್ವಿಕ ಸೇವಾ ಮೂರ್ತಿ :**

ಬಾಲ್ಯದಿಂದಲೂ ಗುರುಲಿಂಗ ಜಂಗಮ ಪ್ರೇಮಿ ಮನೆತನದ ಸಂಸ್ಕಾರದಲ್ಲಿ ಬೆಳೆದು ಬಂದ ಶಿವನಾಗಪ್ಪನಿಗೆ ಧಾರವಾಡ ಮುರುಘಾಮಠದ ಪವಿತ್ರ ವಾತಾವರಣ, ಪೂಜ್ಯ ಮಹಾಂತಪ್ಪಗಳ ಮುಗ್ಧ, ಸಾತ್ವಿಕ ವ್ಯಕ್ತಿತ್ವವು ತುಂಬಾ ಪ್ರಭಾವ ಬೀರಿದವು. ಮೂರು ವರುಷಗಳ ವಿದ್ಯಾರ್ಥಿ ಜೀವನದಲ್ಲಿ ಶ್ರೀಮಠದ ಎಲ್ಲ ನಿಯಮಗಳನ್ನು ಚಾಚೂತಪ್ಪದೇ ಪಾಲಿಸಿಕೊಂಡು ಬಂದರು.

ಪ್ರತಿದಿನ ಬೆಳಗಿನ ನಾಲ್ಕು ಗಂಟೆಗೆ ಎದ್ದು, ಕಸಗುಡಿಸುವುದು, ಕಕ್ಕಸುಗಳನ್ನು ತೊಳೆಯುವುದು, ಸ್ನಾನ ಪೂಜೆ ಮಾಡಿಕೊಂಡು ಸಮಯಕ್ಕೆ ಸರಿಯಾಗಿ ಎಲ್ಲ ವಿದ್ಯಾರ್ಥಿಗಳನ್ನು ಕರೆದುಕೊಂಡು ಪ್ರಾರ್ಥನೆಗೆ ಬರುವುದು **'ಶಿಸ್ತು-ಸ್ವಚ್ಛತೆ-ಸೇವೆ'** ಇವುಗಳ ಸಂಗಮ ಇವರಾಗಿದ್ದರು.

**ಪೂಜ್ಯ ಮಹಾಂತಪ್ಪಗಳವರ ಸಾನಿಧ್ಯದಲ್ಲಿ** ಇವರ ವ್ಯಕ್ತಿತ್ವ ಅಂದರೆ ಅಂತರಂಗದಲ್ಲಿ ಅವಿರಳ ಜ್ಞಾನ, ಬಹಿರಂಗದಲ್ಲಿ ಸತ್ಕ್ರಿಯೆ ಸಹಜವಾಗಿ ವಿಕಸನಗೊಂಡವು. ಪ್ರಾರ್ಥಾನಾ ಸಭೆಯಲ್ಲಿ ಅಥವಾ ಪ್ರಸಾದ ನಿಲಯದಲ್ಲಿ ಪ್ರಸಾದಕ್ಕೆ ಕುಳಿತ ಕಾಲದಲ್ಲಿ ವಿದ್ಯಾರ್ಥಿಗಳು ಅಲ್ಪ-ಸ್ವಲ್ಪ ಗದ್ದಲ ಮಾಡುತ್ತಿದ್ದರೆ, ಪೂಜ್ಯ ಮಹಾಂತಪ್ಪಗಳು ಕೈಮುಗಿದು- " ನೋಡ್ರೆಪಾ, ಗದ್ದಲ ಮಾಡಬೇಡಿರಿ, ನೀವೆಲ್ಲ ಬಸವಾದಿ ಪ್ರಮಥರು, ನಮ್ಮದು ಏನಾದರೂ ತಪ್ಪಿದ್ದಲ್ಲಿ ಕ್ಷಮಿಸಿರಿ" ಎಂದು ನುಡಿದಾಗ, ವಿದ್ಯಾರ್ಥಿಗಳು ಒಮ್ಮೆಲೆ ಶಾಂತವಾಗಿಬಿಡುತ್ತಿದ್ದರು. ಪ್ರಸಾದ ಮಾಡುವ ಕಾಲಕ್ಕೆ ವಿದ್ಯಾರ್ಥಿಗಳು ಪ್ರಸಾದ ನೆಲಕ್ಕೆ ಚೆಲ್ಲಿದರೆ ಅಥವಾ ತಟ್ಟೆಯೊಳಗೆ ಉಳಿಸಿ ಬಿಟ್ಟಿದ್ದರೆ ಪೂಜ್ಯರು ಅವರಿಗೆ ಕೈಮುಗಿದು, ಪ್ರಸಾದ ಮಹಿಮೆ ಬಗ್ಗೆ ಶರಣ ವಚನ ಹೇಳಿ ತಿಳಿವಳಿಕೆ ಹೇಳುತ್ತಿದ್ದರು. **"ಪ್ರಸಾದವನ್ನು ನೀವು ಗೌರವಿಸಿದರೆ ನಿಮ್ಮ ಜೀವನದಲ್ಲಿ ನಿಮಗೆ ಎಂದಿಗೂ ಪ್ರಸಾದದ ಕೊರತೆಯಾಗುವುದಿಲ್ಲ"** ಎಂಬ ಪೂಜ್ಯರ ವಾಣಿಯು ತುಂಬಾ ಪರಿಣಾಮ ಬೀರುತ್ತಿತ್ತು.

ತಂದೆ-ತಾಯಿಯಿಂದ ದೂರವಾಗಿ ಧಾರವಾಡಕ್ಕೆ ಬಂದು ಮಠದಲ್ಲಿದ್ದು ಓದುವ ಮಕ್ಕಳಿಗೆಲ್ಲ ಪೂಜ್ಯ ಮಹಾಂತಪ್ಪಗಳು ಮಾತೃಹೃದಯದ ತಾಯಿಯೇ ಆಗಿದ್ದರು. ಪೂಜ್ಯರು ಆಗಾಗ ಬುಟ್ಟಿ ಬುಟ್ಟಿ ಶೇಂಗಾ, ಪೇರಲಹಣ್ಣು, ನೀರಲಹಣ್ಣು, ದಾಳಿಂಬ, ಚಿಕ್ಕು, ಹಸಿಕಡ್ಲಿಗಿಡ, ಮಾವಿನ ಹಣ್ಣುಗಳನ್ನು ತರಿಸಿ ಸ್ವತಃ ತಾವೇ ಬೊಗಸೆ ತುಂಬ

ಎಲ್ಲರಿಗೂ ಕೊಡುತ್ತಿದ್ದರು. ವಿದ್ಯಾರ್ಥಿಗಳು ಸಂತೋಷದಿಂದ ತಿನ್ನುವುದನ್ನು ಕಂಡು ಹರ್ಷಪಡುತ್ತಿದ್ದರು. ಈ ಹುಡುಗರು ತಮ್ಮ ತಮ್ಮ ಊರುಗಳಲ್ಲಿದ್ದರೆ ಅವರ ತಂದೆ-ತಾಯಿಯರು ಉಣಿಸುವುದು, ತಿನಿಸುವುದು ಮಾಡುತ್ತಿರಲಿಲ್ಲವೇ ? ಇಲ್ಲಿ ಮಠದಲ್ಲಿದ್ದು ತಂದೆ-ತಾಯಿ ನೆನಪಾಗಿ ಅವರು ಕೊರಗಬಾರದು ಎಂಬ ಕಾಳಜಿಯಿಂದ ಪೂಜ್ಯರು ವಾತ್ಸಲ್ಯದಿಂದ ನೋಡಿಕೊಳ್ಳುತ್ತಿದ್ದರು. ಪೂಜ್ಯರ ಈ ಮಾತೃ ಹೃದಯದ ವಾತ್ಸಲ್ಯ ಕಂಡು ಶಿವನಾಗಪ್ಪ ತುಂಬಾ ಪ್ರಭಾವಿತರಾದರು. ಪೂಜ್ಯರ ಆ ಮಮತೆ, ವಾತ್ಸಲ್ಯ ಕಕ್ಕುಲತೆ ಸಹಜವಾಗಿ ಇವರಲ್ಲಿಯೂ ಒಡಮೂಡಿ ಬಂದಿವೆ. ಶ್ರೀ ಮುರುಘಾಮಠ ಶಿವನಾಗಪ್ಪನವರ ಅಧ್ಯಾತ್ಮ ಸಾಧನೆಯ ಬದುಕಿನ ಸಾಧನಾ ಭೂಮಿಯಾಯಿತು. ಸಾತ್ವಿಕ ಸೇವಾಮೂರ್ತಿಯಾಗಿ ರೂಪುತಾಳಿದರು.

ಕಾನೂನು ಶಿಕ್ಷಣ ಓದುವಾಗ ಶ್ರೀ ಬೆಟಸೂರಮಠ, ಶ್ರೀ ರುದ್ರಯ್ಯ ಹಿರೇಮಠ, ಶ್ರೀ ಭೂಸನೂರಮಠ, ಶ್ರೀ ಚೌಕಿಮಠ, ಶ್ರೀ ರವಿ ಬರಗುಂಡಿ, ಶ್ರೀ ಜವಳಿ, ಶ್ರೀ ಕೆ. ಎಸ್. ಬೀಳಗಿ ಇವರೆಲ್ಲ ಸಹಪಾಠಿಗಳಾಗಿದ್ದು. ಮುರುಘಾಮಠದ ಪ್ರಸಾದ ನಿಲಯದಲ್ಲಿದ್ದರು. ಇವರೆಲ್ಲರ ಪ್ರೀತಿಯ ಸ್ನೇಹಿತರಾಗಿ ಅಧ್ಯಯನ ಪೂರೈಸಿದರು. ಎಲ್‌ಎಲ್.ಬಿ. ಪಾಸಾದರು.

**೨೬. ಮಹಾಂತಪ್ಪಗಳ ಅಪ್ಪಣೆ- ಮುರುಘಾಮಠದಲ್ಲಿಯೇ ಇರಬೇಕು :**

೧೯೬೧ ರಿಂದ ೧೯೬೪ ವರೆಗೆ ಮೂರು ವರುಷ ಮುರುಘಾಮಠದಲ್ಲಿ ಸೇವೆ ಮಾಡುತ್ತಲೇ ಪೂಜ್ಯರ ಕೃಪೆಗೆ ಪಾತ್ರರಾಗಿದ್ದು, ಕಾನೂನು ಶಿಕ್ಷಣ ಮುಗುಸಿದರು. ಮುರುಘಾಮಠದ ನಿಯಮಾವಳಿಯಂತೆ ಓದು ಮುಗಿದ ನಂತರ ಮಠದಿಂದ ಹೊರಗಿದ್ದು ಕಾಯಕ ಜೀವನ ಕೈಕೊಳ್ಳಬೇಕು. ಇದನ್ನು ಅರಿತಿದ್ದ ಶಿವನಾಗಪ್ಪ ಹಾಗೂ ಇವರ ಗೆಳೆಯ ಶ್ರೀ ಬೆಟಸೂರಮಠ ಧಾರವಾಡದ ಮಾಳಮಡ್ಡಿಯಲ್ಲಿ ಒಂದು ರೂಮು ಬಾಡಿಗೆಗಾಗಿ ಗೊತ್ತು ಮಾಡಿ ಬಂದರು. ಮಠದ ತಮ್ಮ ಕೋಣೆಯಲ್ಲಿದ್ದ ಹಾಸಿಗೆ-ಹೊದ್ದಿಕೆ, ಕಾನೂನು ಪುಸ್ತಕಗಳ ಗಂಟು-ಮೂಟೆ ಕಟ್ಟಿ, ಹೊರಡಲು ಅನುವಾದರು. ಶ್ರೀ ಶಿವನಾಗಪ್ಪನವರಿಗೆ ಪೂಜ್ಯ ಮಹಾಂತಪ್ಪಗಳ ದರ್ಶನ-ಆಶೀರ್ವಾದ ಪಡೆದು ಹೊರಡಬೇಕೆಂಬ ಇಚ್ಛೆ. ಸಂಜೆ ೫-೬ಂಕ್ಕೆ ಪೂಜ್ಯರ ಹತ್ತಿರ ಹೋಗಿ ಸಾಷ್ಟಾಂಗ ನಮಸ್ಕಾರ ಹಾಕಿದರು. ಮಠದಿಂದ ಹೊರಗಿದ್ದು ವಕೀಲಿ ವೃತ್ತಿಯ ತರಬೇತಿ 'ಅಪ್ರೆಂಟಿಸ್‌ಶಿಪ್' ಮಾಡುವ ವಿಷಯ ತಿಳಿಸಿದರು. ಆಗ ಪೂಜ್ಯರು ಸ್ವಲ್ಪ ಹೊತ್ತು ಮೌನ ತಾಳಿ, ಇವರನ್ನು ನೋಡುತ್ತಾ - 'ನೀನು ಎಲ್ಲಿಗೂ ಹೋಗಬೇಡ, ನೀನು

ಮಠದಲ್ಲಿದ್ದೇ ಕಾಯಕ ಮಾಡು, ನಿನ್ನ ಗೆಳೆಯ ಹೋಗಲಿ, ನಿನ್ನ ಜೀವನಕ್ಕೆ ಶಿವಯೋಗಿ ಮಾರ್ಗ ತೋರಿಸ್ತಾರ, ಇಲ್ಲಿಯೇ ಇರಬೇಕು, ಮಠ ಬಿಟ್ಟು ಹೋಗಬೇಡ' ಎಂದು ಅಪ್ಪಣೆ ಮಾಡಿದರು.

**೨೭. ವಕೀಲಿ ವೃತ್ತಿ - ಅಧ್ಯಾತ್ಮ ಸಾಧನೆ- ಸೇವಾ ವೃತ್ತಿಯಾಗಿ ಪರಿವರ್ತನೆ :**

೧೯೮೪ ರಿಂದ ೧೯೯೧ ವರೆಗೆ ಮತ್ತೆ ಏಳು ವರುಷಗಳ ಕಾಲ ಶ್ರೀ ಮುರುಘಾಮಠದಲ್ಲಿಯೇ ಪೂಜ್ಯರ ಮುಂದಿನ ಅಪ್ಪಣೆ ಆಗುವವರೆಗೆ ಉಳಿದರು. ವಕೀಲಿ ವೃತ್ತಿಯ ತರಬೇತಿ ಪ್ರಾರಂಭ ದಿನ- ಕೋರ್ಟಿಗೆ ಹೊರಡುವ ಸಮಯ. ಖಾದಿ ಧೋತರ, ಖಾದಿ ಅಂಗಿ, ಹವಾಯಿ ಚಪ್ಪಲ್ಲು, ಅಪ್ಪಟ ಸ್ವದೇಶಿ ವೇಶ-ಭೂಷಣ, ಹಣೆಯ ಮೇಲೆ ಮೂರು ಬೆರಳು ವಿಭೂತಿ, ಸುಂದರ ಸಾತ್ವಿಕ ಕಳೆಯ ತರುಣ ನ್ಯಾಯವಾದಿಯಾಗಿ ಪೂಜ್ಯ ಮಹಾಂತಪ್ಪಗಳಿಗೆಸಾಷ್ಟಾಂಗವೆರಗಿ, ಆಶೀರ್ವಾದ ಪಡೆದು ಕೋರ್ಟಿಗೆ ಹೋದರು. ನ್ಯಾಯಾಲಯದ ಒಳಗೆ ಪ್ರವೇಶ, ಎದುರಿಗೆ ನ್ಯಾಯಾಧೀಶರು ಕುಳಿತಿದ್ದರು. ವಕೀಲರುಗಳು ಕೈಮುಗಿದು ಒಳಗೆ ಹೋಗಿ ತಮ್ಮ ತಮ್ಮ ಕುರ್ಚಿಗಳಲ್ಲಿ ಕುಳಿತರೆ, ಇವರು ಕೋರ್ಟಹಾಲ್‌ನಲ್ಲಿ ಒಳಗೆ ಕಾಲಿಡುತ್ತಲೇ ಚಪ್ಪಲಿ ಪಕ್ಕಕ್ಕೆ ಕಳಚಿ, ನ್ಯಾಯಾಧೀಶರಿಗೆ ಸಾಷ್ಟಾಂಗ ನಮಸ್ಕಾರ ಹಾಕಿದರು. ನ್ಯಾಯಾಧೀಶರು ಹಾಗೂ ವಕೀಲರುಗಳು ಬೆರಗಾಗಿ ಎದ್ದು ನಿಂತು ಕೈಮುಗಿದರು. ಬಹಶಃ ಇದು ನ್ಯಾಯಾಲಯದ ಇತಿಹಾಸದಲ್ಲಿಯೇ ಇದು ಮೊದಲ ಘಟನೆಯಾಗಿರ-ಬಹುದೆನಿಸುತ್ತದೆ.

ಶ್ರೀ ಶಿವನಾಗಪ್ಪ ಹೆಗಡಾಳ ಅವರ ಮಾಹಿತಿ ಪಡೆದ ನ್ಯಾಯಾಧೀಶರು ಸಂಜೆ ಕುಟುಂಬ ಪರಿವಾರದೊಂದಿಗೆ ಮುರುಘಾಮಠಕ್ಕೆ ಬಂದು ಪೂಜ್ಯ ಮಹಾಂತಪ್ಪಗಳ ದರ್ಶನ ಪಡೆದು, ಈ ಘಟನೆಯನ್ನು ಪೂಜ್ಯರ ಮುಂದೆ ಹೇಳಿದರಂತೆ. 'ನ್ಯಾಯಾಲಯ-ಗಳೆಂದರೆ ಪವಿತ್ರ ದೇವಾಲಯಗಳಿದ್ದಂತೆ, ನ್ಯಾಯಾಧೀಶರೆಂದರೆ ಜೀವಂತ ದೇವರು' ಎಂಬ ಅರಿವು ಶಿವನಾಗಪ್ಪನವರಲ್ಲಿತ್ತು.

**೨೮. ಸರ್ಕಾರ ಕೊಡಮಾಡಿದ ಸ್ಟೈಪಂಡ ಹಣ ನಿರಾಕರಿಸಿದ್ದು :**

ಆ ಕಾಲದಲ್ಲಿ ಯುವ ವಕೀಲರಿಗಾಗಿ ಸರಕಾರವು ಪ್ರತಿ ತಿಂಗಳು ೫೦೦ ರೂ॥ ಗಳಂತೆ ಸ್ಟೈಪಂಡರಿ ಧನವನ್ನು ನೀಡುತ್ತಿತ್ತು. ಶ್ರೀ ಆಯ್. ಜಿ. ಹಿರೇಗೌಡರ ಹಿರಿಯ ವಕೀಲರ ಹತ್ತಿರ ಜ್ಯೂನಿಯರ್ ಅಡ್ವೋಕೇಟ್ ಆಗಿ ಇವರು ಕಾರ್ಯನಿರ್ವಹಿಸು-

ತ್ತಿದ್ದರು. ೧೯೮೪ ರಿಂದ ೧೯೯೦ ವರೆಗೆ ಆರು ವರ್ಷ ಕಾನೂನು ಸೇವೆಯಲ್ಲಿ ತೊಡಗಿದರು. ಸಂಪೂರ್ಣ ಜ್ಞಾನ ಪಡೆದುಕೊಂಡರು ನಿಜ, ಆದರೆ ವಕೀಲಿ ವೃತ್ತಿ ಇವರ ಗುಣ-ಸ್ವಭಾವಕ್ಕೆ ಒಗ್ಗಲಿಲ್ಲವಾದ್ದರಿಂದ ಸಂಪೂರ್ಣ ಅಧ್ಯಾತ್ಮ ಪ್ರವೃತ್ತಿಯಲ್ಲಿಯೇ ಮುಂದುವರೆದರು. ತಮ್ಮ ಹಿರಿಯ ವಕೀಲರ ಸಲಹೆಯಂತೆ- ಬೆಂಗಳೂರಿಗೆ ಹೋಗಿ, ಸಹಿ ಮಾಡಿ ಆರು ವರುಷದ ಹಣ ತಿಂಗಳಿಗೆ ೫೦೦ ರೂ|| ಗಳಂತೆ ವರುಷಕ್ಕೆ ೬೦೦೦ ರೂ|| ಗಳಂತೆ, ೩೬,೦೦೦ ರೂಪಾಯಿ ಪಡೆದುಕೊಂಡು ಬನ್ನಿರಿ ಎಂದು ತಿಳಿಸಿದಾಗ, ಇವರು ಬೆಂಗಳೂರಿಗೆ ಹೋದರು. ಅಲ್ಲಿಯ ಕೋರ್ಟಿನ ಕಾರ್ಯಾಲಯದಲ್ಲಿ- 'ಸರಕಾರದ ಹಣ ಅದು ಪ್ರಜೆಗಳ ಪವಿತ್ರ ಹಣ, ದಯವಿಟ್ಟು ನನಗೆ ಬೇಡ' ಎಂದು ನಿರಾಕರಿಸಿ, ಹಾಗೆಯೇ ಮರಳಿ ಬಂದರು. ವಕೀಲಿ ವೃತ್ತಿ ತ್ಯಾಗ ಮಾಡಿ, ಪೂಜ್ಯರ ಸೇವೆಯಲ್ಲಿ ಸಂಪೂರ್ಣ ತೊಡಗಿಸಿಕೊಂಡರು.

**೨೯. ಪೂಜ್ಯ ಮಹಾಂತಪ್ಪಗಳ ಪ್ರೀತಿಯ 'ಶಿವದೇವರು' :**

೧೯೮೧ ರಿಂದ ೧೯೯೧ ವರೆಗೆ ಧಾರವಾಡ ಮುರುಘಾಮಠದಲ್ಲಿ ಒಟ್ಟು ಹತ್ತು ವರುಷಗಳ ಕಾಲವಿದ್ದು ಪೂಜ್ಯ ಮಹಾಂತಪ್ಪಗಳ ಅಪ್ಪಣೆಯಂತೆಯೇ ಸೇವೆಯಲ್ಲಿ ತ್ರಿಕರಣಶುದ್ಧಿಯಿಂದ ತೊಡಗಿಸಿಕೊಂಡರು. ಬಿಳಿ ಲುಂಗಿ, ನೆಹರೂ ಶರ್ಟ, ಖಾದಿ ಟೊಪ್ಪಿಗೆ ಧರಿಸಿ ಹಗಲಿರುಳು ಮಠದ ಹಾಗೂ ಪೂಜ್ಯರ ಸೇವೆಯನ್ನು ಕಂಡ, ಪೂಜ್ಯ ಮಹಾಂತಪ್ಪಗಳು ತುಂಬಾ ವಾತ್ಸಲ್ಯದಿಂದ 'ಶಿವನಾಗಪ್ಪ'ನವರನ್ನು **'ಶಿವದೇವರು'** ಎಂದು ಕರೆಯುತ್ತಿದ್ದರು.

**೩೦. ಶಿವಯೋಗಿಗಳ ಇಚ್ಛೆ ಆದಾಗ ಆಗುವಿ :**

ಪೂಜ್ಯ ಶ್ರೀ ಮಹಾಂತಪ್ಪಗಳವರು ಶಿವನಾಗಪ್ಪ ಅವರ ಸ್ವಭಾವ ವೈರಾಗ್ಯ ಸೇವಾಮನೋಭಾವ, ಸಾತ್ವಿಕ ಶರಣ ಜೀವನ,ಸದುವಿನಯ, ಕಿಂಕರತ್ವ ಗಮನಿಸುತ್ತಲೇ ಇದ್ದರು. ಒಂದು ದಿನ ಬೆಳಗಿನ ಪೂಜಾ ಸಮಯಕ್ಕೆ ಇವರಿಗೆ 'ಅನುಗ್ರಹ ದೀಕ್ಷೆ' ಅಂದರೆ ಜಂಗಮದೀಕ್ಷೆ ನೀಡಬೇಕೆಂಬ ಹಂಬಲದಿಂದ ಕಾವಿ ಕಪನಿ, ರುದ್ರಾಕ್ಷಿಮಾಲೆ, ಕ್ರಿಯಾ ಭಸ್ಮ ಇತ್ಯಾದಿ ಸಿದ್ಧವಾಗಿಟ್ಟುಕೊಂಡು, ತಮ್ಮ ಸೇವಾಮರಿಯ ಮೂಲಕ ಕರೆತರಲು ಅಪ್ಪಣೆ ಮಾಡಿದರು. ಪೂಜ್ಯ ಅಪ್ಪಗಳು ಪೂಜಾಕೋಣೆಗೆ ಸ್ನಾನಮಾಡಿ, ಮಡಿ ಬಟ್ಟೆ ಉಟ್ಟುಕೊಂಡು ಬರಲು ತಿಳಿಸಿದ್ದಾರೆ ಎಂದು ಸೇವಾಮರಿ ಬಂದು ಹೇಳಿದಾಗ, ಇವರು ಸ್ನಾನ ಮಾಡಿ ಹೋದರು. ಆಗ ಪೂಜ್ಯರು ತಮ್ಮ ಇಚ್ಛೆ ತಿಳಿಸಿದರು. ತಕ್ಷಣ ಭಯದಿಂದ ಪೂಜ್ಯರ ಕೋಣೆಯಿಂದ ಹೊರ ಬಂದವರೇ, ಮಠ ಬಿಟ್ಟು ಹೊರಟು ಹೋದರು.

ಮಾನಸಿಕವಾಗಿ ಶಿವನಾಗಪ್ಪನವರು 'ಸ್ವಾಮಿ' ಯಾಗಲು ಯೋಚಿಸಿರಲೇ ಇಲ್ಲ. ತಾವು ಕೇವಲ ಸೇವೆ ಮಾಡುತ್ತಾ ಅಧ್ಯಾತ್ಮ ಸಾಧಕನಾಗಿರಬೇಕು ಎಂದು ಮಾತ್ರ ಅಂದು ಕೊಂಡಿದ್ದರು.

ಅನಂತರ, ಪೂಜ್ಯ ಮಹಾಂತಪ್ಪಗಳವರು ಮಠದ ವಿದ್ಯಾರ್ಥಿಗಳ ಮೂಲಕ ಹುಡುಕಿಸಿ ಮಠಕ್ಕೆ ಕರೆಯಿಸಿಕೊಂಡು- **'ಶಿವಯೋಗಿಗಳ ಇಚ್ಛೆ ಆದಾಗ ಸ್ವಾಮಿ ಆಗುವಿಯಂತೆ ಬಾ, ಮಠ ಬಿಟ್ಟು ಎಲ್ಲಿಗೂ ಹೋಗಬೇಡ'** ಎಂದು ವಾತ್ಸಲ್ಯದಿಂದ ಮೈದಡವಿ ತಲೆ ನೇವರಿಸಿ ಆಶೀರ್ವಾದ ಮಾಡಿದರು. ಶಿವನಾಗಪ್ಪ ತನ್ನ ನಿಸ್ವಾರ್ಥ ಸೇವೆಯಿಂದಲೇ ಮುಂದೊಂದು ದಿನ ನಿರಂಜನ ಸ್ವಾಮಿ ಆಗಿಯೇ ಆಗುತ್ತಾನೆ ಎಂಬುದು ಪೂಜ್ಯ ಮಹಾಂತಪ್ಪಗಳ ಅಂತರಾತ್ಮಕ್ಕೆ ಗೊತ್ತಿತ್ತು. ಆಗ ಕಾಲ ಪಕ್ವವಾಗಿರಲಿಲ್ಲವೆಂದು ಕಾಣುತ್ತದೆ.

### ೩೧. ಅಜ್ಜ ಸಿದ್ದಪ್ಪ ಹೆಗಡಾಳ ಲಿಂಗೈಕ್ಯರಾದದ್ದು :

ಶಿವನಾಗಪ್ಪ ಎಲ್‌ಎಲ್.ಬಿ. ಪ್ರಥಮ ವರ್ಷದ ಪರೀಕ್ಷೆ ನಡೆದ ಕಾಲಕ್ಕೆ ನರಗುಂದದಲ್ಲಿ ಅವರ ಅಜ್ಜ ಶ್ರೀ ಸಿದ್ದಪ್ಪ ಹೆಗಡಾಳ ಅವರು ಲಿಂಗೈಕ್ಯರಾದಾಗ, ಈ ಸುದ್ದಿಯನ್ನು ತಂದೆ ವೀರಪ್ಪನವರು ಮಗನಿಗೆ ಧಾರವಾಡಕ್ಕೆ ಹೇಳಿ ಕಳಿಸಲೇ ಇಲ್ಲ. ಪರೀಕ್ಷಾ ಸಮಯದಲ್ಲಿ ಅವನ ಮನಸ್ಸಿನ ಮೇಲೆ ಪರಿಣಾಮವಾಗಿ, ಅಡಚಣೆಯಾಗ ಬಹುದೆಂಬ ಕಾರಣದಿಂದ ತಂದೆಯವರು ತಿಳಿಸಲೇ ಇಲ್ಲ. ಪರೀಕ್ಷೆಯ ನಂತರ ಸಮಾಚಾರ ತಿಳಿಯಿತು. ಎಲ್ಲವೂ ಶಿವನಿಚ್ಛೆ ಎಂದು ಮನದಲ್ಲಿ ಪ್ರಾರ್ಥಿಸಿ ಮೌನವಾಗಿ ಉಳಿದರು. ಅವರ ಮನೆತನವೆಲ್ಲ ಶರಣ ಜೀವನದ ಬದುಕಾಗಿತ್ತು.

### ೩೨. ಅಥಣಿ ಶಿವಯೋಗಿಗಳ ಬಗ್ಗೆ ಶ್ರದ್ಧಾ ಭಕ್ತಿ :

೧೮೮೧ ರಿಂದ ೧೯೬೧ ವರೆಗೆ ಪ್ರತಿವರುಷ ಧಾರವಾಡ ಮುರುಘಾಮಠದಿಂದ ಅಥಣಿ ಗಚ್ಚಿನಮಠದ ವರೆಗೆ ಪೂಜ್ಯ ಮಹಾಂತಪ್ಪಗಳವರೊಂದಿಗೆ, ಮಠದ ಭಕ್ತರೊಂದಿಗೆ, ಸಾಧಕ ವಟುಗಳೊಂದಿಗೆ ಬರಿಗಾಲಿನಿಂದಲೇ ಪಾದಯಾತ್ರೆ ಮಾಡುತ್ತಾ ಬಸವ ಭಜನೆ ಮಾಡುತ್ತಾ ಹೋಗಿ ಬರುತ್ತಿದ್ದರು. ಶಿವಯೋಗಿ, ಶಿವಯೋಗಿ ಎಂಬುದು, ಬಸವಾ ಶಿವನೆ, ಶಿವನೆ ಬಸವಾ ಎಂಬುದು ಶಿವನಾಗಪ್ಪನ ಉಸಿರಾಗಿತ್ತು. ಮಂತ್ರವಾಗಿತ್ತು. ಮುರುಘಾಮಠದಿಂದ ಹೊರಗೆ ಕಾಲೇಜಿಗೆ ಹೋಗುವಾಗ, ಬರುವಾಗ ರೋಡಿನಲ್ಲಿ ಅಥಣಿ-ಹುಬ್ಬಳ್ಳಿ, ಅಥಣಿ-ಧಾರವಾಡ, ಅಥಣಿ-ದಾವಣಗೆರೆ ಹೀಗೆ ಬೋರ್ಡ ಹಾಕಿಕೊಂಡ ಕೆ.ಎಸ್.ಆರ್.ಟಿ.ಸಿ. ಬಸ್ಸುಗಳು ಎದುರಿಗೆ ಕಂಡ ತಕ್ಷಣ

ಕಾಲಲ್ಲಿಯ ಹವಾಯಿ ಚಪ್ಪಲಿ ಪಕ್ಕಕ್ಕೆ ಕಳೆದು, ಭಕ್ತಿಯಿಂದ ತಲೆಬಾಗಿ, ಎರಡೂ ಕೈ ಮುಗಿದು ಶಿವಯೋಗಿ ಶರಣು, ಶಿವಯೋಗಿ ಶರಣು ಎಂದು ಶ್ರದ್ಧೆಯಿಂದ ನಮಸ್ಕರಿಸುತ್ತಿದ್ದರಂತೆ ! ಇವರ ಸಹಪಾಠಿಗಳು, ಮಠದ ವಿದ್ಯಾರ್ಥಿಗಳು ಇವರ ಭಕ್ತಿಯನ್ನು ಕಂಡು ಆಶ್ಚರ್ಯಪಡುತ್ತಿದ್ದರು.

**೩೩. ಶ್ರೀಮಠದ ಬಡವಿದ್ಯಾರ್ಥಿಗಳಿಗೆ ಸಹಾಯ :**

ಶ್ರೀ ಮುರುಘಾಮಠದಲ್ಲಿರುವಾಗ ಪ್ರತಿ ತಿಂಗಳಿಗೊಮ್ಮೆ ಎರಡು ತಿಂಗಳಿಗೊಮ್ಮೆ ನರಗುಂದದಿಂದ ತಂದೆ ವೀರಪ್ಪನವರು ಬಂದು, ಮಗ ಶಿವನಾಗಪ್ಪನಿಗೆ ಹೊಸ ಲುಂಗಿ, ಚಾದರ, ಟಾಯವೆಲ್ಲ ಕೊಡಿಸಿ, ಬ್ಯಾಂಕಿನಲ್ಲಿ ಇವರ ಹೆಸರಿನ ಅಕೌಂಟಿಗೆ ಸ್ವಲ್ಪ ಹಣ ಕಟ್ಟಿ ಹೋಗುತ್ತಿದ್ದರಂತೆ.ಶಿವನಾಗಪ್ಪನವರುಮಠದ ಎಲ್ಲಾ ೧೨೬ ಕೋಣೆಗಳಲ್ಲಿರುವ ವಿದ್ಯಾರ್ಥಿಗಳಿಗೆ ಪ್ರತಿ ದಿನ ಭೆಟ್ಟಿಯಾಗಿ, ಅವರ ಸುಖ-ದುಃಖಗಳನ್ನು ವಿಚಾರಿಸುತ್ತಿದ್ದರು. ಬೆಳಗಿನ ಜಾವ ೪ ಗಂಟೆಗೆ ಎದ್ದು ಎಲ್ಲ ಕೋಣೆಗಳಿಗೆ ಹೋಗಿ ಬಾಗಿಲು ಬಡಿದು ಎಲ್ಲರ ಹೆಸರು ಹೇಳಿ ಕರೆದು ಎಬ್ಬಿಸುತ್ತಿದ್ದರು. ಅಂದಾಜು ೫೦೦ ವಿದ್ಯಾರ್ಥಿಗಳ ಹೆಸರು, ಅವರ ವಿವರ ಇವರಿಗೆ ನೆನಪಿನಲ್ಲಿರುತ್ತಿತ್ತು. ಆ ಬಡ ವಿದ್ಯಾರ್ಥಿಗಳಲ್ಲಿ ಯಾರಾದರೂ ಚಳಿಯಲ್ಲಿ ನಡಗುತ್ತಾ ಮಲಗಿಕೊಂಡಿದ್ದರೆ, ಅವರಿಗೆ ತಮ್ಮ ಚಾದರ, ಟಾಯವಲ್, ಲುಂಗಿಗಳನ್ನೊಯ್ದು ಹೊದಿಸಿ ಬರುತ್ತಿದ್ದರು. ಮರು ತಿಂಗಳು ತಂದೆಯವರು ಬಂದಾಗ, ಮತ್ತೆ ಇವರಿಗೆ ಹೊಸ ಚಾದರ, ಟಾಯವಲ್ಲ, ಲುಂಗಿ ಖರೀದಿಸಿ ಕೊಟ್ಟು ಹೋಗುತ್ತಿದ್ದರು. ಮಗನ ಕರುಣೆಯ ಹೃದಯ, ಬಡವರ ಬಗೆಗಿನ ಕಾಳಜಿ ಕಂಡು ತಂದೆ ವೀರಪ್ಪನವರಿಗೆ ಧನ್ಯತಾಭಾವ ಉಂಟಾಗುತ್ತಿತ್ತು.

**೩೪. ವಿದ್ಯಾರ್ಥಿಗಳ ಸೇವೆ-ಜಂಗಮ ಸೇವೆ :**

ಪ್ರತಿದಿನ ಸಾಯಂಕಾಲ ಕೋರ್ಟಿನಿಂದ ಶ್ರೀ ಮುರುಘಾಮಠಕ್ಕೆ ಬರುವಾಗ ಬಿಸ್ಕೀಟು, ಬಾಳೆಹಣ್ಣು, ಪೇರಲಹಣ್ಣು ಇತ್ಯಾದಿ ಒಂದು ಕೈಚೀಲ ತುಂಬಾ ತರುತ್ತಿದ್ದರು. ಹೈಸ್ಕೂಲು ಓದುವ ಚಿಕ್ಕ ವಯಸ್ಸಿನ ಮಕ್ಕಳು ಬೆಳಿಗ್ಗೆ ೧೦ ಗಂಟೆಗೆ ಪ್ರಸಾದ ಮಾಡಿ ಹೋದವರು, ಸಂಜೆ ಹಸಿದು ಕುಳಿತಿರುತ್ತಿದ್ದರು. ಅವರ ಬಾಡಿದ ಮುಖ ಕಂಡು ಶಿವನಾಗಪ್ಪನವರಿಗೆ ಕರುಳು ಚುರುಕ್ ಎನ್ನುತ್ತಿತ್ತು. ತಾವು ಕೈಚೀಲದಲ್ಲಿ ತಂದ ಬಿಸ್ಕೀಟು, ಹಣ್ಣುಗಳನ್ನು ಆ ವಿದ್ಯಾರ್ಥಿಗಳಿಗೆ ಹಂಚುತ್ತಿದ್ದರು. ಬಡ ವಿದ್ಯಾರ್ಥಿಗಳಿಗೆ ಇವರು ಪ್ರೀತಿಯ ಅಣ್ಣನಾಗಿದ್ದರು. ವಿದ್ಯಾರ್ಥಿಗಳಲ್ಲಿ ಜಂಗಮ ಸ್ವರೂಪ ಕಂಡು, ಜಂಗಮ ದಾಸೋಹಗೈಯುತ್ತಿದ್ದರು.

ಮಠದ ಬೋರ್ಡಿಂಗ್ ಕೋಣೆಗಳಲ್ಲಿ ಯಾವುದೇ ವಿದ್ಯಾರ್ಥಿ ಜ್ವರ, ತಲೆ ನೋವು, ನೆಗಡಿ, ಕೆಮ್ಮು ಬಂದು ಅನಾರೋಗ್ಯಕ್ಕೆ ಒಳಗಾಗಿದ್ದರೆ, ತಕ್ಷಣ ವಿಕ್ಸ್, ಅಮೃತಾಂಜನ ಹಚ್ಚಿ ತಿಕ್ಕಿ, ರಗ್ಗು ಹೊದಿಸಿ ಆರೈಕೆ ಮಾಡುತ್ತಿದ್ದರು. ಜ್ವರ ಬಹಳ ಬಂದಿದ್ದರೆ, ಸೈಕಲ್ ಮೇಲೆ ಹುಡುಗರನ್ನು ಕೂಡಿಸಿಕೊಂಡು, ಕೆಲವು ಸಲ ತಾವೇ ಹೆಗಲ ಮೇಲೆ ಹಾಕಿಕೊಂಡು ಚಿಕ್ಕರಡ್ಡಿ ಡಾಕ್ಟರ ಆಸ್ಪತ್ರೆಗೆ ಒಯ್ದು, ಔಷಧೋಪಚಾರ ಮಾಡಿಸಿ ಕೊಂಡು ಬರುತ್ತಿದ್ದರು. ಹೀಗೆ ಬಡಮಕ್ಕಳ ಸೇವೆ ಮಾಡುತ್ತಾ ಆ ಮಕ್ಕಳಿಗೆಲ್ಲ ಸ್ವತಃ ತಾಯಿಯಂತೆ ಆರೈಕೆ ಮಾಡುತ್ತಿದ್ದರು. ಹೀಗಾಗಿ ಆ ಬಡ ವಿದ್ಯಾರ್ಥಿಗಳ ತಂದೆ-ತಾಯಿ, ಪಾಲಕರು ತಮ್ಮ ತಮ್ಮ ಮಕ್ಕಳಿಂದ ಇದನ್ನು ಕೇಳಿ ತಿಳಿದು, ನಿಶ್ಚಿಂತೆಯಿಂದ ತಮ್ಮ ಊರು ಗಳಿಗೆ ಹೋಗುತ್ತಿದ್ದರು. ಇದುವೇ ನಿಜವಾದ ಜಂಗಮ ಪೂಜೆ; ಲಿಂಗದ ಮುಖ ಜಂಗಮ ಎಂಬ ಬಸವತತ್ವದ ನಿಜಾಚರಣೆ ಇವರಲ್ಲಿ ಸಹಜವಾಗಿ ಅಳವಟ್ಟಿತ್ತು.

**೩೫. ಗಳಿಸಬೇಕ್ರಪಾ, ಉಳಿಸಬೇಕ್ರಪಾ, ಬಳಸಬೇಕ್ರಪಾ :**

ಪೂಜ್ಯ ಶ್ರೀ ಮಹಾಂತಪ್ಪಗಳು ಶ್ರೀಮಠದ ಶಿವಾನುಭವ ಶಿಬಿರಗಳಲ್ಲಿ, ಶಿವಾನುಭವ ಕಾರ್ಯಕ್ರಮಗಳಲ್ಲಿ ಯಾವಾಗಲೂ ನೀಡುತ್ತಿದ್ದ ಆಶೀರ್ವಚನದಲ್ಲಿ 'ಗಳಿಸಬೇಕ್ರಪಾ, ಉಳಿಸಬೇಕ್ರಪಾ, ಬಳಸಬೇಕ್ರಪಾ' ಎಂದು ಅನುಭಾವ ನೀಡುತ್ತಿದ್ದರು. ಸತ್ಯ ಶುದ್ಧ ಕಾಯಕದಿಂದ ಗಳಿಸಬೇಕು, ಅದನ್ನು ಉಳಿಸಬೇಕು, ಉಳಿಸಿದ್ದನ್ನು ದಾಸೋಹಂಭಾವದಿಂದ ಸಮಾಜಕ್ಕೆ ಬಳಸಬೇಕು. ಪೂಜ್ಯರ ಈ ಆಶೀರ್ವಚನವನ್ನು ಭಕ್ತಿಯಿಂದ ಆಚರಣೆಗೆ ಸಹಜವಾಗಿ ತರುತ್ತಿದ್ದವರು ಶ್ರೀ ಶಿವನಾಗಪ್ಪ ಹೆಗಡಾಳ ಶರಣರು. 'ಮಾಡಬೇಕ್ರಪಾ, ನೋಡಬೇಕ್ರಪಾ, ಕೂಡಬೇಕ್ರಪಾ' ಇದು ಪೂಜ್ಯ ಮಹಾಂತಪ್ಪಗಳವರ ಲಿಂಗಾನುಭಾವದ ನುಡಿಗಳು. ಅಂದರೆ ಇಷ್ಟಲಿಂಗ ಪೂಜೆ ಮಾಡುವುದು, ಪ್ರಾಣಲಿಂಗವನು ನೋಡುವುದು, ಭಾವಲಿಂಗದಲ್ಲಿ ಕೂಡುವುದು. ಅಂದರೆ ತನು-ಮನ-ಭಾವಗಳು ಇಷ್ಟಲಿಂಗ-ಪ್ರಾಣಲಿಂಗ- ಭಾವಲಿಂಗಗಳಲ್ಲಿ ಸಮರಸವಾಗುವುದು. ಇದನ್ನು ಅರಿತು-ಆಚರಣೆಗೆ ತಂದು, ಲಿಂಗಾನುಭಾವಿಯಾದವರು ಶಿವನಾಗಪ್ಪನವರು.

**೩೬. ಶ್ರೀ ಮುರುಘಾಮಠದಿಂದ ಹಾವೇರಿ ಹೊಸಮಠಕ್ಕೆ ಸೇವೆ :**

ಚಿತ್ರದುರ್ಗ ಶ್ರೀ ಮುರುಘರಾಜೇಂದ್ರ ಬೃಹನ್ಮಠದ ಇಂದಿನ ಪೂಜ್ಯ ಶ್ರೀ ಶಿವಮೂರ್ತಿ ಮುರುಘಾ ಶರಣರು ೧೯೮೮ ರಲ್ಲಿ ಶಿರಸಿಯ ಶ್ರೀ ರುದ್ರದೇವರ ಮಠ ದಿಂದ ಹಾವೇರಿಯ ಹೊಸಮಠಕ್ಕೆ ಉತ್ತರಾಧಿಕಾರಿಗಳಾಗಿ ಬಂದು, ೧೯೯೦ ರಲ್ಲಿ

ಹೊಸಮಠದ ಅಧಿಪತಿಗಳಾಗಿದ್ದರು. ಪೂಜ್ಯ ಶ್ರೀ ಮಹಾಂತಪ್ಪಗಳು ಅವರಿಗೆ ನಿರಂಜನ ಜಂಗಮ ಅನುಗ್ರಹ ದೀಕ್ಷಾ ಕರುಣಿಸಿದ್ದರು. ಪರಮಪೂಜ್ಯ ಶ್ರೀಮ.ನಿ.ಪ್ರ. ಶಿವಮೂರ್ತಿ ಸ್ವಾಮಿಗಳವರ ಸೇವೆಗಾಗಿ, ಪೂಜ್ಯ ಶ್ರೀ ಮಹಾಂತಪ್ಪಗಳವರು 'ಶಿವನಾಗಪ್ಪ'ನನ್ನು ೧೯೬೧ ರಲ್ಲಿ ಹಾವೇರಿ ಹೊಸಮಠಕ್ಕೆ ಕಳಿಸಿಕೊಟ್ಟರು.

ಅನಂತರ, ಪೂಜ್ಯ ಶ್ರೀ ಶಿವಮೂರ್ತಿಸ್ವಾಮಿಗಳು ೧೯೬೧ ಜನೇವರಿ ೩೧ ರಂದು ಚಿತ್ರದುರ್ಗ ಬೃಹನ್ಮಠಕ್ಕೆ ಉತ್ತರಾಧಿಕಾರಿಗಳಾಗಿ ಹೋದರು. ಆಗ ಪೂಜ್ಯ ರೊಂದಿಗೆ ಶಿವನಾಗಪ್ಪನವರು ಸೇವಾಮೂರ್ತಿಯಾಗಿ ಹೋದರು. ೧೯೬೧ ನೇ ಅಕ್ಟೋಬರ್ ತಿಂಗಳಲ್ಲಿ ವಿಜಯದಶಮಿ ಮಹೋತ್ಸವದೊಂದಿಗೆ ಪೂಜ್ಯ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಶ್ರೀ ಮಲ್ಲಿಕಾರ್ಜುನ ಮಹಾಸ್ವಾಮಿ ಗಳವರು, ತಮ್ಮ ಬೃಹನ್ಮಠದ ನೂತನ ಜಗದ್ಗುರುಗಳಾಗಿ ಶ್ರೀ ಶಿವಮೂರ್ತಿ ಸ್ವಾಮಿ ಗಳಿಗೆ ವೈಭವಪೂರ್ಣವಾಗಿ ಪಟ್ಟಾಭಿಷೇಕ ಮಾಡಿ, 'ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಶ್ರೀ ಶಿವಮೂರ್ತಿ ಮುರುಘರಾಜೇಂದ್ರ ಮಹಾಸ್ವಾಮಿಗಳು' ಎಂಬ ನೂತನ ನಾಮಕರಣ ಮಾಡಿ ಶೂನ್ಯ ಸಿಂಹಾಸನಾರೋಹಣ ಮಾಡಿದರು.

ಅಂದಿನಿಂದ ಶ್ರೀ ಶಿವನಾಗಪ್ಪನವರು ಪೂಜ್ಯ ಜಗದ್ಗುರುಗಳವರ ಸೇವೆಯಲ್ಲಿ ಚಿತ್ರದುರ್ಗ ಬೃಹನ್ಮಠದಲ್ಲಿ ತೊಡಗಿಸಿಕೊಂಡರು.

**೩.೭. ಚಿತ್ರದುರ್ಗದ ಶ್ರೀ ಶಿವಮೂರ್ತಿ ಮುರುಘಾ ಶರಣರಿಂದ ಜಂಗಮ ಸಂಸ್ಕಾರ :**

ಶ್ರೀ ಶಿವನಾಗಪ್ಪನವರ ಸೇವಾಭಾವನೆ, ಸದುವಿನಯ-ಸದಾಚಾರ, ಕಿಂಕರತ್ವ, ಸುಜ್ಞಾನ-ಸದ್ಭಾವ ಗುರುತಿಸಿದ ಪೂಜ್ಯ ಶ್ರೀ ಜಗದ್ಗುರುಗಳು, ಇವರಿಗೆ ಜಂಗಮ ಸಂಸ್ಕಾರ ಕರುಣಿಸಲು ನಿರ್ಧರಿಸಿದರು. ಅವರ ತಂದೆ-ತಾಯಿಯವರ ಒಪ್ಪಿಗೆ ಪಡೆಯಲು ಪೂಜ್ಯ ಜಗದ್ಗುರುಗಳು ನರಗುಂದಕ್ಕೆ ದಯಮಾಡಿಸಿ, ಸಮಾಜ ಸೇವೆಗಾಗಿ- ಧರ್ಮಕ್ಕಾಗಿ ತಮ್ಮ ಮಗ ಶಿವನಾಗಪ್ಪನನ್ನು ಕೊಡಲು ಕೇಳಿದರು. ಆಗ ತಂದೆ ವೀರಪ್ಪನವರು ಭಕ್ತಿಭಾವದಿಂದ- 'ಬುದ್ಧಿ, ಶಿವನಾಗಪ್ಪ ನಮ್ಮ ಮನೆಯ ಹಿರಿಯಮಗ, ಇನ್ನೂ ನಾಲ್ಕು ಜನ ತಮ್ಮಂದಿರ-ತಂಗಿಯ ಜವಾಬ್ದಾರಿ ನಿರ್ವಹಿಸ- ಬೇಕಿದೆ' ಎಂದು ವಿನಮ್ರವಾಗಿ ನುಡಿದಾಗ **ಪೂಜ್ಯ ಶ್ರೀ ಶಿವಮೂರ್ತಿ ಮುರುಘಾ ಶರಣರು- 'ಶರಣರೆ, ನಾನೇ ಸ್ವತಃ ನಿಮ್ಮ ಹಿರಿಯ ಮಗನಾಗಿ ಜವಾಬ್ದಾರಿವಹಿಸ್ತೇನೆ, ಶಿವನಾಗಪ್ಪನನ್ನು ನೀಡಿರಿ'** ಎಂದು ಕೇಳಿದಾಗ, ಗುರುಲಿಂಗ ಜಂಗಮ ಪ್ರೇಮಿಗಳಾದ ಶ್ರೀ ವೀರಪ್ಪ ಹಾಗೂ ಶ್ರೀಮತಿ ಶಾಂತಮ್ಮ ದಂಪತಿಗಳು ಭಕ್ತಿಭಾವದಿಂದ ಒಪ್ಪಿಗೆ ಇತ್ತರು.

ಅನಂತರ ಚಿತ್ರದುರ್ಗ ಬೃಹನ್ಮಠದಲ್ಲಿ ಶ್ರೀ ಶಿವನಾಗಪ್ಪನಿಗೆ ನಿರಂಜನ ಜಂಗಮ ದೀಕ್ಷೆ ಕರುಣಿಸಿ **ಶ್ರೀ ಸಿದ್ಧರಾಮ ಸ್ವಾಮಿಗಳು** ಎಂದು ನೂತನ ನಾಮಕರಣ ಮಾಡಿ, ತಮ್ಮ ಬೃಹನ್ಮಠದ ಚರಮೂರ್ತಿಗಳನ್ನಾಗಿ ಮಾಡಿದರು.

**೩೮. ಚಿತ್ರದುರ್ಗ ಮುರುಘಾಮಠದಲ್ಲಿ ಸೇವೆ :**

ಪೂಜ್ಯ ಶ್ರೀ ಸಿದ್ಧರಾಮ ಸ್ವಾಮಿಗಳು ಸಂಪೂರ್ಣವಾಗಿ ಪೂರ್ವಾಶ್ರಮ ನಿರಸನ ಮಾಡಿಕೊಂಡು ನಿಜ ವಿರಕ್ತರಾಗಿ ಸಮಾಜರೂಪಿ ಜಂಗಮ ಸೇವೆಯಲ್ಲಿ ನಿರತರಾದರು. ಹಿರಿಯ ಪೂಜ್ಯರಾದ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಮಲ್ಲಿಕಾರ್ಜುನ ಮಹಾಸ್ವಾಮಿಗಳವರ, ಕಿರಿಯ ಜಗದ್ಗುರುಗಳಾದ ಶ್ರೀಮನ್ಮಹಾರಾಜ ನಿರಂಜನ ಶಿವಮೂರ್ತಿ ಮುರುಘರಾಜೇಂದ್ರ ಮಹಾಸ್ವಾಮಿಗಳವರ ಸೇವೆ, ಪೂಜ್ಯರು ಅಪ್ಪಣೆ ಮಾಡುವ ಪ್ರತಿಯೊಂದು ಆದೇಶವನ್ನು ಶಿರಸಾವಹಿಸಿ ಶ್ರದ್ಧೆಯಿಂದ ನಿರ್ವಹಿಸುವುದು, ಕ್ರಿಯಾಶೀಲತೆಯಿಂದ ಪೂಜ್ಯರ ಕೃಪೆಗೆ ಪಾತ್ರರಾದರು. ೧೯೯೪ ಅಗಷ್ಟ ೭ ರಂದು ಹಿರಿಯ ಜಗದ್ಗುರುಗಳು ಲಿಂಗೈಕ್ಯರಾದ ನಂತರ, ಬೃಹನ್ಮಠದ ಸಂಪೂರ್ಣ ಜವಾಬ್ದಾರಿಯು ಶ್ರೀ ಶಿವಮೂರ್ತಿ ಮುರುಘಾ ಶರಣರಿಗೆ ಬಂದಿತು.

ಹಿರಿಯ ಜಗದ್ಗುರುಗಳಿರುವಾಗಲೇ ಪೂಜ್ಯ ಶ್ರೀ ಶಿವಮೂರ್ತಿ ಮುರುಘಾ ಶರಣರು ತಮ್ಮ ವೈಚಾರಿಕ ಬಸವ ಪ್ರಜ್ಞೆಯೊಂದಿಗೆ ಕ್ರಾಂತಿಕಾರಕ ದಿಟ್ಟ ಹೆಜ್ಜೆಗಳಿನ್ನಿಡುತ್ತಾ ಶ್ರೀಮಠದ ಪರಿಸರದಲ್ಲಿ, ಭಕ್ತರಲ್ಲಿ ಬಸವಧರ್ಮ-ಸಿದ್ಧಾಂತ-ಸಂಸ್ಕೃತಿಯ ನಿಜಾಚರಣೆಗೆ ಚಾಲನೆ ನೀಡಿದ್ದರು. ನಾಡಿನೆಲ್ಲೆಡೆ ಪರಿವರ್ತನೆಯ ಗಾಳಿ ಬೀಸತೊಡಗಿತ್ತು. **ನಾವು ಸಂಸ್ಕೃತದ ಗುರುಗಳಲ್ಲ, ಸಂಸ್ಕೃತಿಯ ಗುರುಗಳು** ಎಂಬುದನ್ನು ಸಾಧಿಸಿ ತೋರತೊಡಗಿದ್ದರು. ಹಿರಿಯ ಗುರುಗಳೂ ಸಹ ಪರಮಾನಂದ ಭರಿತರಾಗಿ ಹೃದಯಾರೆ ಬೆಂಬಲ ಸೂಚಿಸುತ್ತಿದ್ದರು.

ಚಿತ್ರದುರ್ಗ ಬೃಹನ್ಮಠದ ಪೂಜ್ಯ ಜಗದ್ಗುರುಗಳು **ಜಗದ್ಗುರು ಶಬ್ದ ತ್ಯಾಗಮಾಡಿ ಶರಣರು ಎಂಬ ನೂತನ ಹೆಸರಿನಿಂದ ಮುನ್ನಡೆದರು.** ಅವರ ಸಾಧನೆಗಳು ದ್ವಿಗುಣಗೊಳ್ಳುತ್ತ, ಅನಂತವಾಗತೊಡಗಿದವು. ಶರಣ ಸಂಸ್ಕೃತಿ ಮಹೋತ್ಸವ, ಬಸವೇಶ್ವರ ಗ್ರಾಮವಿಕಾಸ ಯೋಜನೆ, ಜಮುರಾ ಸಂಗೀತ ಮಹಾವಿದ್ಯಾಲಯ, ಬಸವ ಕೇಂದ್ರಗಳ ಬೆಳವಣಿಗೆ, ಬಸವತತ್ವ ಮಹಾವಿದ್ಯಾಲಯ ಸ್ಥಾಪನೆ, ವಚನ ಕಮ್ಮಟ ಪರೀಕ್ಷೆಗಳು, ಬಸವಶ್ರೀ ಪುರಸ್ಕಾರ ಯೋಜನೆ, ಸಹಜ ಶಿವಯೋಗ ಪ್ರಾರಂಭ, ಮಹಿಳಾ ಸಬಲೀಕರಣ ಯೋಜನೆಗಳು, ಬಸತತ್ವಾಧಾರಿತ ಕಲ್ಯಾಣ ಮಹೋತ್ಸವಗಳು, ಕರ್ತೃಗದ್ದುಗೆ

ಮೇಲೆ ಧರ್ಮಗ್ರಂಥ ವಚನ ತಾಡೋಲೆಗಳ ಕಟ್ಟುಗಳು, ಜಾಗತಿಕ ಸೌಹಾರ್ದತೆ ಯಾತ್ರೆಗಳು, ಅಂತರಾಷ್ಟ್ರೀಯ ಬಸವ ಸಂಘಟನೆಗಳು, ಅಡ್ಡಪಲ್ಲಕ್ಕಿ ಬೆಳ್ಳಿ ಸಿಂಹಾಸನ, ಬಂಗಾರ ಕಿರೀಟಗಳ ತ್ಯಾಗ, ಬಸವಭಕ್ತರೊಂದಿಗೆ ಸರಳವಾಗಿ ಬೆರೆಯುವಿಕೆ, ಇಳಕಲ್ಲ, ಗದಗ, ಭಾಲ್ಕಿ ಮುಂತಾದ ಹಿರಿಯ ಪೂಜ್ಯರೊಂದಿಗೆ ಬಸವಭಕ್ತಿಯ ಸೌಹಾರ್ದಯುತ ಸಂಬಂಧ ೧೯೯೧ ರಿಂದ ೨೦೦೨ರ ವರೆಗೆ ನಡೆದ ಪ್ರತಿಯೊಂದು ಕಾರ್ಯಗಳಲ್ಲಿ ಪೂಜ್ಯ ಶ್ರೀ ಸಿದ್ಧರಾಮ ಸ್ವಾಮಿಗಳು ಪೂಜ್ಯ ಗುರುಗಳಾದ ಶ್ರೀ ಶಿವಮೂರ್ತಿ ಮುರುಘಾ ಶರಣರೊಂದಿಗೆ, ಅವರ ಅಪ್ಪಣೆಯನ್ನು ಚಾಚೂತಪ್ಪದೇ ಪಾಲಿಸುತ್ತಾ ಕ್ರಿಯಾಶೀಲ ಜಂಗಮವಾಗಿ ದುಡಿದರು. ನಾಡಿನ ಬಸವಭಕ್ತರ ಪ್ರೀತಿ-ವಿಶ್ವಾಸಗಳಿಗೆ ಪಾತ್ರರಾದರು. ಕ್ರಿ.ಶ. ೨೦೦೦ ಇಸ್ವಿಯಲ್ಲಿ ಪೂಜ್ಯರೊಂದಿಗೆ ಇಂಗ್ಲೆಂಡ, ಅಮೇರಿಕಾ, ಇಟಲಿ, ಜರ್ಮನಿ, ಫ್ರಾನ್ಸ್, ಸಿಂಗಾಪೂರ ಮುಂತಾದ ೧೮ ದೇಶಗಳಲ್ಲಿ ಬಸವತತ್ವ ಪ್ರಸಾರದಲ್ಲಿ ಭಾಗಿ ಯಾಗಿ ಬಂದರು. ಈ ಜಾಗತಿಕ ಸೌಹಾರ್ದತಾ ಯಾತ್ರೆಯಲ್ಲಿ ಪ್ರೊ. ಸಿದ್ಧಣ್ಣ ಲಂಗೋಟಿ ಹಾಗೂ ಶ್ರೀಮತಿ ಡಾ. ಕಲ್ಯಾಣಮ್ಮ ಲಂಗೋಟಿ ಅವರು ಪಾಲ್ಗೊಂಡು ಬಸವತತ್ವ ಕುರಿತು ಅನುಭಾವ ನೀಡಿದರು. ಪೂಜ್ಯ ಶ್ರೀ ಸಿದ್ಧರಾಮ ಸ್ವಾಮಿಗಳು, ಪೂಜ್ಯ ಶ್ರೀ ಶಿವಮೂರ್ತಿ ಮುರುಘಾಶರಣರ ಸಾಧನೆಗಳ ಶಿಖರಕ್ಕೆ ಅಡಿಪಾಯದೊಳಗಣ ಭದ್ರ ಕಲ್ಲುಗಳಂತೆ ಒಬ್ಬರಾಗಿ ನಿಷ್ಠೆಯಿಂದ ತಮ್ಮ ಸೇವೆ ಸಲ್ಲಿಸಿದರು.

ಅಪ್ಪ ಬಸವಣ್ಣನವರು ಹೇಳಿವಂತೆ-

ಮಾಡುವಂತಿರಬೇಕು ಮಾಡಧಂತಿರಬೇಕು
ಮಾಡುವ ಮಾಟದೊಳಗೆ ತಾನಿಲ್ಲದಂತಿರಬೇಕು
ಕೂಡಲಸಂಗಮದೇವರ ನೆನೆಯುತ್ತಾ ನೆನೆಯುತ್ತಾ
ನೆನೆಯದಂತಿರಬೇಕು

ಇಂತಹ ನಿಸ್ವಾರ್ಥ, ನಿಃಸ್ಪೃಹ, ನಿರ್ಮೋಹಿ, ನಿರಹಂಕಾರಿ ವ್ಯಕ್ತಿತ್ವದ ವ್ಯಕ್ತಿಯನ್ನು ಗುರುತಿಸಿ, ಅವರ ಸಾಧನೆಗೆ, ಸೇವೆಗೆ ಅವಕಾಶವಿತ್ತು ಬೆಳೆಸಿದ ಕೀರ್ತಿ ಪೂಜ್ಯಶ್ರೀ ಶಿವಮೂರ್ತಿ ಮುರುಘಾಶರಣರಿಗೆ ಸಲ್ಲುತ್ತದೆ.

**೩೯. ಚಿತ್ರದುರ್ಗ ಮುರುಘಾಮಠದಿಂದ-ಮೈಸೂರಿನ ಮಹಾಲಿಂಗೇಶ್ವರ ಮಠಕ್ಕೆ:**

ಚಿತ್ರದುರ್ಗ ಶ್ರೀ ಶಿವಮೂರ್ತಿ ಮುರುಘಾಮಠ ಶರಣರ ಸದಿಚ್ಛೆ, ಅಪ್ಪಣೆ ಯಂತೆ ಮೈಸೂರು ಪ್ರಾಂತದಲ್ಲಿ ಬಸವತತ್ವ ಪ್ರಸಾರದ ಮಹಾಮಣಿಹ

ಪೂರೈಸಲೋಸುಗ ಡಿಸೆಂಬರ ೧೬, ೨೦೦೨ ರಂದು ಪೂಜ್ಯ ಶ್ರೀ ಸಿದ್ಧರಾಮಸ್ವಾಮಿಗಳವರು ಚಿತ್ರದುರ್ಗದ ಶಾಖಾಮಠವಾದ **ಮೈಸೂರಿನ ಶ್ರೀ ಮಹಾಲಿಂಗೇಶ್ವರ ಮಠಕ್ಕೆ ಚರಮೂರ್ತಿಗಳಾಗಿ** ದಯಮಾಡಿಸಿದರು.

ಮೈಸೂರಿನಲ್ಲಿ ಸರಿಯಾಗಿ ಒಂದು ವರ್ಷ- ಅದ್ಭುತವಾಗಿ ಜಂಗಮ ಕಾಯಕ ಮಾಡಿದರು. ವೈದಿಕ ವೀರಶೈವ ಪುರೋಹಿತಶಾಹಿ, ಬಹುದೇವೋಪಾಸನೆ ಮುಂತಾದ ಸಂಪ್ರದಾಯಗಳ ಮಧ್ಯದಲ್ಲಿ ಶ್ರದ್ಧೆಯಿಂದ ಬಸವತತ್ವದ ಆಚರಣೆಗೆ ಒತ್ತು ಕೊಟ್ಟರು. ಪ್ರತಿಯೊಂದು ಬಡಾವಣೆಗಳಲ್ಲಿ ಮನೆಯಲ್ಲಿ ಮಹಾಮನೆ ಕಾರ್ಯಕ್ರಮಗಳು, ಪ್ರತಿ ತಿಂಗಳು ಶರಣ ಸಂಗಮ ಶಿವಾನುಭವ ಗೋಷ್ಠಿಗಳು, ವಚನ ಪಾಠ ಶಾಲೆ ಪ್ರಾರಂಭಿಸಿ ನೂರಾರು ಚಿಕ್ಕ ಮಕ್ಕಳಿಗೆ ವಚನ ಕಲಿಸುವುದು, ವಚನ ಸಂಗೀತ ಶಾಲೆ ಸ್ಥಾಪಿಸಿ ತನ್ಮೂಲಕ ತಾಯಂದಿರಿಗೆ, ಮಕ್ಕಳಿಗೆ ಸಂಗೀತ ಕಲಿಸುವ ಏರ್ಪಾಟು ಮಾಡಿದ್ದು, ವಚನ ನೃತ್ಯ ಶಾಲೆ ಮಾಡಿ, ಮಕ್ಕಳಿಗೆ ವಚನ ನೃತ್ಯ ತರಬೇತಿ ಮಾಡಿಸಿದ್ದು, ವಾರಕ್ಕೊಮ್ಮೆ ಸುತ್ತ ಮುತ್ತಲಿನ ಹಳ್ಳಿಗಳಿಗೆ ಹೋಗಿ ದುರ್ವ್ಯಸನ-ದುಶ್ಚಟಗಳ ಭಿಕ್ಷೆ ಬೇಡಿ, ಗ್ರಾಮೀಣ ಜನರಿಗೆ ಸನ್ಮಾರ್ಗದಲ್ಲಿ ನಡೆಯುವಂತೆ ವಚನ ಸಂದೇಶ ನೀಡುವುದು, ಆ ಪ್ರಾಂತದಲ್ಲಿ ಎಲ್ಲಿಯಾದರೂ ರೈತರು ಆತ್ಮಹತ್ಯೆ ಮಾಡಿಕೊಂಡ ಸುದ್ದಿ ತಿಳಿದು ಬಂದರೆ, ಭಕ್ತರನ್ನು ಕರೆದುಕೊಂಡು ಆ ಹಳ್ಳಿಗಳಿಗೆ, ಮನೆಗಳಿಗೆ ಹೋಗಿ ಸಂತ್ರಸ್ತ ಕುಟುಂಬದವರಿಗೆ ಒಂದು ಚೀಲ ಅಕ್ಕಿ, ಬೇಳೆ ನೀಡಿ ಸಾಂತ್ವನ ಹೇಳಿ ಬರುವುದು, ಲಿಂಗಾಯತರ ಮನೆಗಳಿಗೆ ಹೋಗಿ ಇಷ್ಟಲಿಂಗ ಪೂಜೆಯ ಮಹತ್ವ ತಿಳಿಸಿ ಹೇಳುವುದು, ಬಸವಧರ್ಮದ ಸಂಸ್ಕಾರಗಳನ್ನು ನೀಡುವುದು, ಹೀಗೆ ಕ್ರಿಯಾಜಂಗಮವಾಗಿ ಪೂಜ್ಯ ಗುರುಗಳು ಒಪ್ಪಿಸಿದ ಕಾಯಕವನ್ನು ಶ್ರದ್ಧೆ-ನಿಷ್ಠೆಯಿಂದ ಮಾಡಿ ಆ ಮೈಸೂರು ಪ್ರಾಂತದಲ್ಲಿ ಒಂದೇ ವರುಷದಲ್ಲಿ ಮನೆ ಮಾತಾದರು.

ಸಾದಾ-ಸರಳ ಜೀವನ, ಹಿತಮಿತ ಆಹಾರ, ಶುದ್ಧ ಆಚಾರ-ವಿಚಾರ, ಚಾರಿತ್ರ್ಯವಂತ ಪರಿಶುದ್ಧ ಜೀವನ, ನಿಜವಾದ ಸ್ವಭಾವ ವೈರಾಗ್ಯಗಳಿಂದಾಗಿ **ಸ್ವಾಮಿಗಳೆಂದರೆ ಸಿದ್ಧರಾಮ ಸ್ವಾಮಿಗಳು** ಎಂದು ಭಕ್ತಿ ಗೌರವ-ಅಭಿಮಾನ ಪಡುವಂತೆ ಸದ್ವಿನಯದ ಸಾಕಾರಮೂರ್ತಿಯಾಗಿ ಕಾರ್ಯ ಮಾಡಿ, ಮೈಸೂರು ಪ್ರಾಂತದ ಲಿಂಗಾಯತ, ಬಸವಭಕ್ತರಿಗೆಲ್ಲ ಪ್ರೀತಿ ಪಾತ್ರರಾದರು.

**೪೦. ಮೈಸೂರಿನಿಂದ ಚಿತ್ತರಗಿ ಸಂಸ್ಥಾನಮಠ ಇಳಕಲ್ಲಕ್ಕೆ ಉತ್ತರಾಧಿಕಾರಿ :**

ಪರಮಪೂಜ್ಯ ಮಹಾಂತ ಶಿವಯೋಗಿಗಳು ಚಿತ್ತರಗಿ ಪೀಠದ ೧೯ನೇ

ಮಠಾಧೀಪತಿಯಾಗಿ ೧೯೭೦ ಮೇ, ೭ ರಂದು ಅಧಿಕಾರ ವಹಿಸಿಕೊಂಡು ೩೨ ವರ್ಷ ಗತಿಸಿದ ನಂತರ ಅಂದರೆ ಪೂಜ್ಯರು ೭೨ ನೇ ವರ್ಷ ದಾಟಿದ ಬಳಿಕ ಅನೇಕ ಹಿರಿಯ ಭಕ್ತರು, ಜಗದ್ಗುರುಗಳು ಆಗಾಗ ಪೂಜ್ಯರೊಂದಿಗೆ ಉತ್ತರಾಧಿಕಾರಿ ವಿಚಾರ ಪ್ರಸ್ತಾಪಿಸುತ್ತಿದ್ದರು. ಪೂಜ್ಯರು ಮಾತ್ರ ಮೌನವಾಗಿಯೇ ಇರುತ್ತಿದ್ದರು. ಕೆಲವು ಮಠಾಧೀಶರು ಪೂಜ್ಯ ಮಹಾಂತಪ್ಪಗಳವರ ಹುಟ್ಟೂರಿನ ಅಂದರೆ ಹಿಪ್ಪರಿಗೆಯ ವಿದ್ಯಾವಂತ ಸುಸಂಸ್ಕೃತ ಪೂಜ್ಯರ ಹೆಸರನ್ನೂ ಸೂಚಿಸಿದ್ದರು. ಆದರೆ ಪೂಜ್ಯರು ವಿರಕ್ತ ಮಠಗಳಿಗೆ ಪೂರ್ವಾಶ್ರಮದ ರಕ್ತಸಂಬಂಧಿಗಳನ್ನು ಉತ್ತರಾಧಿಕಾರಿಯಾಗಿ ಮಾಡಿ-ಕೊಳ್ಳುವುದು ಯೋಗ್ಯವಲ್ಲ. **ರಕ್ತ ಸಂಬಂಧಕ್ಕಿಂತ ಭಕ್ತಿ ಸಂಬಂಧ ಶ್ರೇಷ್ಠ.** ಎಂದು ಸೌಜನ್ಯದಿಂದಲೇ ಅವರ ವಿಚಾರವನ್ನು ದೂರ ಸರಿಸಿದರು.

ಅಪ್ಪ ಬಸವಣ್ಣವರ ಕರುಣೆ ಹಾಗೂ ಶ್ರೀ ವಿಜಯಮಹಾಂತ ಶಿವಯೋಗಿಗಳ ಕೃಪೆಯಿಂದಾಗಿ ಪೂಜ್ಯರ ಗಮನಕ್ಕೆ ಒಬ್ಬ ಯೋಗ್ಯ ವ್ಯಕ್ತಿ ಕಂಡರು. ಅವರನ್ನು ಹತ್ತಾರು ವರುಷಗಳಿಂದ ಪೂಜ್ಯರು ನೋಡುತ್ತಲೇ ಇದ್ದರು. ಅವರ ಸಾತ್ವಿಕ ಸ್ವಭಾವ, ಸದವಿನಯದ ನಡತೆ, ಶುದ್ಧ ಚಾರಿತ್ರ್ಯ ಉನ್ನತ ವಿದ್ಯೆ ಪಡೆದಿದ್ದರೂ ವಿದ್ಯಾ ಮದವಿಲ್ಲದ ನಿರಹಂಕಾರಿ, ಸತ್ಯ ಶುದ್ಧ ಕಾಯಕ, ದಾಸೋಹಂಭಾವಿಯ ಆಚರಣೆ ಕಂಡಿದ್ದರು. ಧಾರವಾಡ ಮುರುಘಾಮಠದಲ್ಲಿ, ಹಾವೇರಿ ಹೊಸಮಠದಲ್ಲಿ, ಚಿತ್ರದುರ್ಗ ಬೃಹನ್ಮಠದಲ್ಲಿ ಅವರ ಕ್ರಿಯಾಶೀಲ ವ್ಯಕ್ತಿತ್ವ ಗಮನಿಸಿದ್ದರು. ಕ್ರಿ.ಶ. ೨೦೦೩ ನೇ ಇಸ್ವಿಯ ಕಾಲಕ್ಕೆ ಅವರು ಮೈಸೂರಿನ ಮಹಾಲಿಂಗೇಶ್ವರ ಮಠದಲ್ಲಿದ್ದು ಬಸವತತ್ವ ಪ್ರಸಾರದ ಚರಜಂಗಮವಾಗಿ ಕಾರ್ಯನಿರ್ವಹಿಸುತ್ತಿದ್ದರು. ಅವರ ಆಗಿನ ಹೆಸರು ಸಿದ್ಧರಾಮ ಸ್ವಾಮಿಗಳು. ಪೂಜ್ಯರಿಗೆ ಆ ವ್ಯಕ್ತಿ ಬಗ್ಗೆ ವಿಚಾರ ಹೊಳೆಯಿತು. ಆಗಲೇ ಆ ಸ್ವಾಮಿಗಳಿಗೆ ೪೨ ವರ್ಷವಾಗಿತ್ತು. ಒಬ್ಬಿಬ್ಬ ಶರಣರು, ಭಕ್ತರ ಮೂಲಕ 'ಅವರಿಗೆ ಯಾವುದಾದರೂ ಮಠಕ್ಕೆ ಸ್ವಾಮಿಗಳಾಗಲು ಇಚ್ಛೆ ಇದೆಯೋ ಇಲ್ಲವೋ ಕೇಳಿ, ತಿಳಿದು ಹೇಳಿರಿ' ಎಂದೂ ಸೂಚಿಸಿದ್ದರಂತೆ.

ಭಕ್ತರು ಶ್ರೀ ಸಿದ್ಧರಾಮಸ್ವಾಮಿಗಳನ್ನು ಸಂಪರ್ಕಿಸಿ ಕೇಳಿದಾಗ- **"ನನಗೆ ಯಾವ ಮಠಕ್ಕೂ ಅಧಿಕಾರಿಯಾಗಲು ಇಚ್ಛೆಯಿಲ್ಲ.** ಚರಜಂಗಮವಾಗಿಯೇ ದೇಶ-ವಿದೇಶ-ಗಳನ್ನು ಸಂಚರಿಸುತ್ತಾ ಬಸವಗುರುವಿನ ತತ್ವ ಪ್ರಸಾರ ಮಾಡುವ ಧ್ಯೇಯವಿದೆ" ಎಂದು ದೃಢವಾಗಿ ಉತ್ತರಿಸಿದರಂತೆ. ಈ ವಿಚಾರ ಕೇಳಿ-ತಿಳಿದಾಗ ಪೂಜ್ಯ ಮಹಾಂತಪ್ಪಗಳು ಭಕ್ತರೊಂದಿಗೆ ಚಿಂತನಗೈದು **"ಮಠಾಧಿಕಾರ ಬೇಡ, ಒಲ್ಲೆ ಎನ್ನುವ ಸಾಧಕರು ಮಾತ್ರ ನಿಜವಾದ ವಿರಕ್ತರಾಗಬಲ್ಲರು"** ಎಂದು ನಿರ್ಧರಿಸಿ, ಅವರಲ್ಲಿಗೆ ಅವರ ಪರಿಚಯದ

ನಾಲ್ಕುರು ಭಕ್ತರನ್ನು ಕಳಿಸಿ, ಚಿತ್ರದುರ್ಗದ ಶಿವಮೂರ್ತಿ ಜಗದ್ಗುರುಗಳ ಮೂಲಕ ಒಪ್ಪಿಸಿದರಂತೆ. ಪೂಜ್ಯರಾದ ಹಿರಿಯರ ಆದೇಶವನ್ನು ತಿರಸ್ಕರಿಸಿದರೆ ತಪ್ಪಾದೀತೆಂದು ಭಾವಿಸಿ ಅವರು ಒಪ್ಪಿಕೊಂಡರು.

ಪೂಜ್ಯ ಮಹಾಂತ ಶಿವಯೋಗಿಗಳು ಭಕ್ತರೊಡಗೂಡಿ ಚರ್ಚಿಸಿ, ಗದಗ, ಬೆಳಗಾವಿ, ನಿಡಸೋಸಿ, ಬಾಗಲಕೋಟೆ, ಕೆ.ಆರ್. ಪೇಟೆ, ಹುಲಸೂರು, ಲಿಂಗಸೂರು, ಭಾಲ್ಕಿ, ಸಿದ್ಧಯ್ಯನಕೋಟೆ, ನಾಗಣಸೂರು, ಶಿರೂರ, ಅಥಣಿ, ಬೆಂಗಳೂರು, ಮೈಸೂರು ಮುತಾದ ಜಗದ್ಗುರುಗಳು-ಸ್ವಾಮಿಗಳಿಗೆ ಈ ವಿಚಾರ ತಿಳಿಸಿ, ಅವರೆಲ್ಲರ ಸದಿಚ್ಛೆಯಂತೆ ದಿನಾಂಕ ೧೬-೧೨-೨೦೦೩ ರಂದು ಬೆಳಿಗ್ಗೆ ೧೦ ಗಂಟೆಗೆ ಇಳಕಲ್ಲ ಶ್ರೀ ಮಠದಲ್ಲಿ **'ನೂತನ ಉತ್ತರಾಧಿಕಾರಿಗಳ ಹಾರ್ದಿಕ ಸ್ವಾಗತ ಸಮಾರಂಭ'** ಜರುಗಿತು. ಚಿತ್ತರಗಿ ಪೀಠದ ಸಮಗ್ರ ಬಸವ ಭಕ್ತರೆಲ್ಲ ಸಂತಸಪಟ್ಟರು. ಇಳಕಲ್ಲದಲ್ಲಿ ಹಬ್ಬದ ಸಡಗರ ಉಂಟಾಯಿತು.

## ಜನ ಜಾಗೃತಿ ಸಮಾವೇಶ :

ನರಗುಂದದ **ಲಿಂಗಾಯತ ಭಕ್ತ ಮನೆತನದ** ಶ್ರೀ ಸಿದ್ಧರಾಮಸ್ವಾಮಿಗಳನ್ನು ಚಿತ್ತರಗಿ ಪೀಠದ ೨೦ನೇ ಉತ್ತರಾಧಿಕಾರಿಯಾಗಿ ಆಯ್ಕೆ ಮಾಡಿಕೊಂಡ ವಿಚಾರವನ್ನು ಕೆಲವರು ಏನೇನೋ ಕಾರಣಗಳನ್ನು ಮುಂದೆ ಮಾಡಿ, ವಿರೋಧ ವ್ಯಕ್ತ ಮಾಡ-ತೊಡಗಿದರು. ಪರ-ವಿರೋಧ ಅಭಿಪ್ರಾಯಗಳು ತೀಕ್ಷ್ಣ ವಾಗತೊಡಗಿದ್ದರಿಂದ, ದಿನಾಂಕ ೨೬-೦೮-೨೦೦೪ ರಂದು ಇಳಕಲ್ಲದಲ್ಲಿ ಜನಜಾಗೃತಿವುಂಟು ಮಾಡಿ, ಜನರಲ್ಲಿಯ ಗೊಂದಲ ನಿವಾರಣೆ ಮಾಡಲೋಸುಗ **ಪೂಜ್ಯ ಶ್ರೀ ಜಗದ್ಗುರು ತೋಂಟದ ಸಿದ್ಧಲಿಂಗ ಸ್ವಾಮಿಗಳು ಗದಗ, ಪೂಜ್ಯಶ್ರೀ ಜಗದ್ಗುರು ಶಿವಮೂರ್ತಿ ಮುರುಘರಾಜೇಂದ್ರ ಸ್ವಾಮಿಗಳು ಚಿತ್ರದುರ್ಗ, ಪೂಜ್ಯಶ್ರೀ ಜಗದ್ಗುರು ಗುರುಸಿದ್ಧ ರಾಜಯೋಗೀಂದ್ರ ಸ್ವಾಮಿಗಳು ಮೂರುಸಾವಿರಮಠ ಹುಬ್ಬಳ್ಳಿ,** ಪೂಜ್ಯಶ್ರೀ ಸಿದ್ಧ ರಾಮೇಶ್ವರಸ್ವಾಮಿಗಳು ನಾಗನೂರ-ಬೆಳಗಾವಿ ಹಾಗೂ ಬಾಗಲಕೋಟೆ, ದಾವಣಗೆರೆ, ಶಿರೂರ, ಲಿಂಗಸಗೂರ, ಕೆಆರ್ ಪೇಟೆ, ರಬಕವಿ ಮರೆಗುದ್ದಿ, ಪಿ.ಎಂ. ಬುದ್ನಿ, ಧಾರವಾಡ, ಮನಸೂರು, ಮುಂತಾದ ಶ್ರೀಗಳು, ಇಳಕಲ್ಲ ನಗರದ ಎಲ್ಲ ಸಂಘ-ಸಂಸ್ಥೆಗಳ ಜನರು, ಬೃಹತ್ ಪಾದಯಾತ್ರೆ ಮಾಡಿ, ಜನಜಾಗೃತಿ ಸಮಾವೇಶ ಮಾಡಿ ದಿನಾಂಕ ೧೨-೦೯-೨೦೦೪ ರಂದು ನಡೆಯಲಿರುವ ಪಟ್ಟಾಧಿಕಾರ ಸಮಾರಂಭಕ್ಕೆ ಸಹಕರಿಸಬೇಕೆಂದು ತಿಳಿವಳಿಕೆ ನೀಡಿ ಅನುಭಾವ ಮಾಡಿದರು.

ದಿನಾಂಕ ೩೦-೦೮-೨೦೦೪ ರಂದು ಇಳಕಲ್ಲದ ಕಂಠಿ ಸರ್ಕಲ್‌ದಲ್ಲಿರುವ ಶ್ರೀ ವಿಜಯಮಹಾಂತೇಶ ಅನುಭವ ಮಂಟಪದಲ್ಲಿ ಹಂಪಿಯ ಕನ್ನಡ ವಿಶ್ವ-ವಿದ್ಯಾಲಯ ಹಾಗೂ ಶ್ರೀ ವಿಜಯಮಹಾಂತೇಶ ವಿದ್ಯಾವರ್ಧಕ ಸಂಸ್ಥೆಯು ಸಂಯುಕ್ತವಾಗಿ ಆಯೋಜಿಸಿದ್ದ **"ಐತಿಹಾಸಿಕ ಪರಂಪರೆ ಉಳಿಸಿ"** ಎಂಬ ಸಪ್ತಾಹದ ಸಮಾರಂಭ ನಡೆದಿತ್ತು. ಅಲ್ಲಿ ಪೂಜ್ಯ ಮಹಾಂತ ಅಪ್ಪಗಳು ಹಾಗೂ ಉತ್ತರಾಧಿಕಾರಿ ಶ್ರೀ ಸಿದ್ಧರಾಮ ಸ್ವಾಮಿಗಳು ಸಾನಿಧ್ಯವಹಿಸಿದ್ದರು. ಆ ಸಮಾರಂಭದಲ್ಲಿ ಒಮ್ಮಿಂದೊಮ್ಮಲೆ ನುಗ್ಗಿ ಬಂದ ಉದ್ರಿಕ್ತ ಜನರ ಗುಂಪು ದೊಣ್ಣೆ, ಕಲ್ಲುಗಳಿಂದ ಪೂಜ್ಯರ ಮೇಲೆ ದಾಳಿಮಾಡಿತು. ಇಡೀ ಸಭಾಭವನ ರಣರಂಗವಾಯಿತು. ಉತ್ತರಾಧಿಕಾರಿ ನೇಮಕ ವಿರೋಧಿಸಲು ಲಾರಿಗಳಲ್ಲಿ ಬಂದ ಜನರು ಹಿಂಸೆಗೆ ಇಳಿದಾಗ, ಪೂಜ್ಯರು ಗಾಯಗೊಂಡರು. ಪಿ.ಎಸ್.ಆಯ್. ಸೇರಿ ಹಲವಾರು ಪೋಲೀಸರೂ ಗಾಯ-ಗೊಂಡರು. **ನಡೆಯಬಾರದಾದ ದುರ್ಘಟನೆಯು** ನಡೆದು ಹೋಯಿತು ೧೮೦ ಜನರನ್ನು ಬಂಧಿಸಿ ಪೋಲೀಸರು ಬಳ್ಳಾರಿ ಜೈಲಿಗೆ ಒಯ್ದರು, ನಿಷೇಧಾಜ್ಞೆ ಜಾರಿಯಾಯಿತು.

ಪೂಜ್ಯರು ಗದಗಿನ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆದು ಬಂದರು. ಪೂಜ್ಯರ ಮೇಲಿನ ಹಲ್ಲೆಯನ್ನು ನಾಡಿನೆಲ್ಲೆಡೆಯ ಸಂಘ-ಸಂಸ್ಥೆಗಳು, ಮಠ-ಪೀಠಗಳವರು, ದೇಶ-ವಿದೇಶಗಳ ಪ್ರಜ್ಞಾವಂತರು ಖಂಡಿಸಿದರು. ಶಾಂತವಾಗಿ ಕುಳಿತು-ಚರ್ಚಿಸಿ ಪರಿಹಾರ ಕಂಡುಕೊಳ್ಳಬೇಕಾದದ್ದು ಹಿಂಸೆಗೆ ತಿರುಗಿ ಭಕ್ತ ಮನಸ್ಸುಗಳು ಕ್ಷೋಭೆಗೊಂಡವು. ಪೂಜ್ಯರು ದೈಹಿಕವಾಗಿ-ಮಾನಸಿಕವಾಗಿ ಜರ್ಜಿತರಾದರು. ಆದಾಗ್ಯೂ ಮಾತೃ ಹೃದಯದ ಮಹಾಂತಪ್ಪಗಳು ತಮ್ಮನ್ನು ವಿರೋಧಿಸಿದವರೂ, 'ಹೊಯ್ದವರೆನ್ನ ಬಂಧುಗಳೆಂಬೆ ಎಂಬಂತೆ' ಅವರೂ ನಮ್ಮವರು, ನಮ್ಮ ಭಕ್ತರೇ ಇದ್ದಾರೆಂದು ಬಳ್ಳಾರಿ ಜೈಲಿಗೆ ಹೋಗಿ (೮-೯-೨೦೦೪ ರಂದು) ಬಂಧಿತರಾದ ಭಕ್ತರಿಗೆ ಸಾಂತ್ವನ ಹೇಳಿದರು. ೧೮೨ ಜನ ಬಂಧಿಗಳಾಗಿದ್ದಭಕ್ತರ ಪರವಾಗಿ ಮಾತನಾಡಿದ ಬಸಯ್ಯ ಹಿರೇಮಠ ಅವರು "ಸ್ವಾಮಿಗಳು ತಮ್ಮನ್ನು ಕಾಣಲು ಬಂದಿರುವುದು ತಮಗೆ ಸಂತಸ ತಂದಿದೆ... ಉತ್ತರಾಧಿಕಾರಿಗಳ ಪಟ್ಟಾಧಿಕಾರ ಸಮಾರಂಭಕ್ಕೆ ನಾವು ಅಡ್ಡಿಪಡಿಸುವುದಿಲ್ಲ" ಎಂದು ಹೇಳಿದರು. (ಪ್ರಜಾವಾಣಿ ವರದಿ ೯-೯-೨೦೦೪)

ಈ ದುರ್ಘಟನೆಯಿಂದಾಗ ಸಾತ್ವಿಕ ಭಕ್ತರು ಮನನೊಂದರು. ಇದಕ್ಕೆ ಪೂಜ್ಯ ಮಹಾಂತಪ್ಪಗಳ ಮಾತೃಹೃದಯದ ಮಮತೆಯ ಮಲಾಮು ಮಾತ್ರ ಗಾಯವನ್ನು ಮಾಯಿಸುವ ಔಷಧಿಯಾಗಿದೆ.

## ೪೧. ಚಿತ್ತರಗಿ ಸಂಸ್ಥಾನಮಠ ಇಳಕಲ್ಲದ ಪಟ್ಟಾಧಿಕಾರ ಮಹೋತ್ಸವ :

ಚಿತ್ತರಗಿ ಪೀಠ ಪರಂಪರೆಯು ೧೨ ನೇ ಶತಮಾನದ ಬಸವಗುರು ಪ್ರಣೀತ ಲಿಂಗವಂತಧರ್ಮದ ಕೇಂದ್ರ ಅನುಭವ ಮಂಟಪದ ಶೂನ್ಯಪೀಠ ಪರಂಪರೆಯ ಅಲ್ಲಮಪ್ರಭುಗಳಿಂದ ಮೊದಲ್ಗೊಂಡು,ಯಡೆಯೂರು ತೋಂಟದ ಸಿದ್ಧಲಿಂಗ ಶಿವಯೋಗಿಗಳ ಶಿಷ್ಯ-ಪ್ರಶಿಷ್ಯರ ಬಳಿವಿಡಿದು ಸಾಗಿಬಂದ ಶರಣ ಪರಂಪರೆಯುಳ್ಳ-ದ್ದಾಗಿದೆ. ಈ ಪರಂಪರೆಯ ೧೮ನೆಯ ಮಠಾಧೀಶರಾದ ಪರಮಪೂಜ್ಯ ಮಹಾತಪಸ್ವಿ ಪರಮದಾಸೋಹಿ ಲಿಂ. ಶ್ರೀ ವಿಜಯಮಹಾಂತ ಶಿವಯೋಗಿಗಳವರು ವಿಶ್ವಗುರು ಬಸವಣ್ಣನವರ ವಚನಗಳನ್ನು 'ಅಪ್ಪನವರ ವಚನಗಳು' ಎಂದು ಭಕ್ತಿಯಿಂದ ಬೆನ್ನಿಗೆ ಕಟ್ಟಿಕೊಂಡು ಪಾರಾಯಣ ಮಾಡುತ್ತಾ, ನಾಡನ್ನೆಲ್ಲಸಂಚರಿಸುತ್ತಾ ಶಿವಾನುಭವ ಬೋಧಿಸುತ್ತಾ, ಮಹಾಲಿಂಗದೊಳು ಬಯಲಾದರು.

ಈ ಚಿತ್ತರಗಿ ಚಿಜ್ಯೋತಿಯ ಬಸವಜ್ಯೋತಿಯಾಗಿ ೧೯ನೇ ಪೀಠಾಧಿಪತಿ-ಗಳಾಗಿರುವ ಪೂಜ್ಯ ಶ್ರೀ ಡಾ|| ಮಹಾಂತಶಿವಯೋಗಿಗಳು ೧೯೭೦ ರಿಂದ ಇಂದಿನ-ವರೆಗೆ ಚಿತ್ತರಗಿ ಪೀಠದ ಕೀರ್ತಿಯನ್ನು ಭಾರತದಾದ್ಯಂತ, ಸಪ್ತ ಸಮುದ್ರಗಳಾಚೆ ಪಾಶ್ಚಿಮಾತ್ಯ ದೇಶಗಳಾದ ಯುರೋಪಖಂಡದ ಇಂಗ್ಲೆಂಡ, ಸ್ಕಾಟಲ್ಯಾಂಡ್, ಐರ್ಲ್ಯಾಂಡ ಮುಂತಾದ ದೇಶಗಳವರೆಗೂ ಹಬ್ಬಿಸಿದರು.

ಈ ಪೂಜ್ಯರ ಹಾಗೂ ಬಸವಭಕ್ತರ, ನಾಡಿನ ಹರ ಗುರು ಚರಮೂರ್ತಿಗಳ ಸಮ್ಮುಖದಲ್ಲಿ ದಿನಾಂಕ ೧೨-೦೯-೨೦೦೪ ರಂದು ನಡೆದ ಪಟ್ಟಾಧಿಕಾರ ಮಹೋತ್ಸವದಲ್ಲಿ **೨೦ನೇ ಅಧಿಪತಿಗಳಾಗಿ** ಜಂಗಮಸ್ಥಲ ಪಡೆದು, ಸಮಾಜ ಸೇವಾ ದೀಕ್ಷೆಗೆ ಅಣಿಯಾದವರು **ಪೂಜ್ಯಶ್ರೀ ಮ.ನಿ.ಪ್ರ. ಗುರುಮಹಾಂತ ಸ್ವಾಮಿಗಳವರು.**

ಅಂದು ಬೆಳಿಗ್ಗೆ ೫-೦೦ ಗಂಟೆಗೆ ಚೆನ್ನಗಿರಿ ತಾಲೂಕಿನ ಪಾಂಡೋಮಟ್ಟಿ ವಿರಕ್ತಮಠದ ವಯೋವೃದ್ಧರೂ, ಅನುಭಾವಿಗಳೂ ಆದ ಪೂಜ್ಯ ಶ್ರೀ ಮ.ನಿ.ಪ್ರ. ಚೆನ್ನಬಸವ ಮಹಾಸ್ವಾಮಿಗಳವರ ಜಂಗಮ ಹಸ್ತದಿಂದ ಶ್ರೀ ಸಿದ್ಧರಾಮ ಸ್ವಾಮಿಗಳ-ವರೆಗೆ ಬಸವಾನುಗ್ರಹದೊಂದಿಗೆ ಜಂಗಮಸ್ಥಲ ಪ್ರದಾನವಾಗಿ, ಸಮಾಜ ಸೇವಾ ದೀಕ್ಷೆ ಹೊಂದಿ **'ಶ್ರೀ ಮ.ನಿ.ಪ್ರ. ಗುರುಮಹಾಂತ ಸ್ವಾಮಿಗಳು' ಎಂಬ ನೂತನ ಹೆಸರಿನಿಂದ ಚಿತ್ತರಗಿ ಪೀಠ ಪರಂಪರೆಯ ೨೦ನೆಯ ಪೀಠಾಧೀಶರಾದರು.** ನಾಡಿನೆಲ್ಲೆಡೆಯಿಂದ ದಯಮಾಡಿಸಿದ್ದ ಪೂಜ್ಯರಾದ ಗದಗ, ಹುಬ್ಬಳ್ಳಿ, ಚಿತ್ರದುರ್ಗ, ನಿಡಸೋಸಿ ಜಗದ್ಗುರು-ಗಳವರು, ಬಸವಕಲ್ಯಾಣ, ಹುಲಸೂರು, ಭಾಲ್ಕಿ, ಗುಲಬರ್ಗಾ, ಬೆಳಗಾವಿ, ಅಥಣಿ,

ಬಾಗಲಕೋಟ, ಕೆ.ಆರ್. ಪೇಟೆ, ಬೀದರ ಮರೆಗುದ್ದಿ, ರಬಕವಿ, ಲಿಂಗಸಗೂರು, ಬೈಲೂರು, ದಾವಣಗೆರೆ, ಧಾರವಾಡ, ಬೆಂಗಳೂರು, ತುಮಕೂರು, ಮೈಸೂರು, ಶಿವಮೊಗ್ಗ, ನಿಡವಂಚ, ಮನಸೂರು, ಸಿಂದಗಿ ಮುಂತಾದ ಗುರು-ವಿರಕ್ತ ಸ್ವಾಮಿಗಳು, ಭಾರತದಾದ್ಯಂತದಿಂದ ಆದಮಿಸಿದ್ದ ಬಸವ ಭಕ್ತರು, ನಾಡಿನ ಖ್ಯಾತ ಸಾಹಿತಿಗಳು, ಸಂಶೋಧಕರು, ಅನುಭಾವಿಗಳು ಪೂಜ್ಯರಿಗೆ ಶುಭ ಹಾರೈಸಿದರು. ಹಿರಿಯರಾದ ಪೂಜ್ಯಶ್ರೀ ಮ.ನಿ.ಪ್ರ. ಮಹಾಂತ ಸ್ವಾಮಿಗಳು- ನೂತನ ಪೀಠಾಧಿಪತಿಗಳಾದ ಶ್ರೀ ಮ.ನಿ.ಪ್ರ. ಗುರುಮಹಾಂತ ಸ್ವಾಮಿಗಳವರಿಗೆ ಪ್ರತಿಜ್ಞಾ ಬೋಧಿಸಿದರು.

**ಅಂದಿನ ಪಟ್ಟಾಧಿಕಾರ ಸಮಾರಂಭದಲ್ಲಿ ಅನುಭಾವ ನೀಡಿದ ಪೂಜ್ಯರ, ಅನುಭಾವಿಗಳ ಅನುಭಾವದ ನುಡಿಗಳು ಕೆಳಗಿನಂತಿವೆ-**

-೧-

"ಪೂಜ್ಯ ಮಹಾಂತ ಸ್ವಾಮಿಗಳು ಬಸವಣ್ಣನವರ ವಚನ ಹೊತ್ತು ನಾಡು-ಜಗತ್ತನ್ನೆಲ್ಲಾ ಸಂಚರಿಸಿದ್ದಾರೆ. ವಚನ ಬೋಧಿಸಿದರು, ವಚನದಂತೆ ನಡೆದರು. ಜಾತಿ-ಯಿಂದ ಗುರು ದೊಡ್ಡೋನಾಗೋದಿಲ್ಲ. ಜ್ಞಾನಜ್ಯೋತಿಯಿಂದ ಗುರು ದೊಡ್ಡೋ-ನಾಗ್ತಾನೆ. ಮಹಾಂತ ಅಪ್ಪಗಳು ಜ್ಞಾನಗುರುಗಳು. ಅವರು ಇಂದು ಗುರುಮಹಾಂತ ಸ್ವಾಮಿಗಳ ಕೈಯಲ್ಲಿ ದೀಪ ಕೊಟ್ಟಿದ್ದಾರೆ. ಗುರುಮಹಾಂತರು ದೀಪ ಹಿಡಿದು ಬಂದಾಗ ದೀಪದ ಬೆಳಕಿನಲ್ಲಿ ಸಾಗಬೇಕೇ ಹೊರತು, ದೀಪ ಹಿಡಿದ ಕೈ ನೋಡಬಾರದು. ಬೆಳಕಿ-ನಲ್ಲಿ ಮುನ್ನಡೆಯಬೇಕು. ಈ ಸತ್ಯ ಅರಿತುಕೊಂಡರೆ ಭೇದ ಭಾವ ಎಲ್ಲಿಯದು? ಎಲ್ಲರೂ ಬೆಳಕಿನ ಸ್ವರೂಪಿಗಳು. ಪೂಜ್ಯ ಮಹಾಂತ ಅಪ್ಪಗಳು ಅದ್ಭುತ ಕಾರ್ಯಮಾಡಿದ್ದು, ತಮ್ಮ ಜೀವನ ಸಾರ್ಥಕ ಮಾಡಿಕೊಂಡಿದ್ದಾರೆ. ಅದು ಚಿತ್ತರಗಿ ಚಿಜ್ಯೋತಿಯ ಬೆಳಕು. ಅದು ಬಸವಜ್ಯೋತಿಯ ಬೆಳಕು ಈ ಮಹಾಂತ ಬೆಳಕಿನಲ್ಲಿ ಗುರುಮಹಾಂತರೊಂದಿಗೆ ಎಲ್ಲರೂ ಸಾಗಬೇಕು".

**-ಪೂಜ್ಯ ಶ್ರೀ ಸಿದ್ಧೇಶ್ವರ ಸ್ವಾಮಿಗಳು,** ಜ್ಞಾನಯೋಗಾಶ್ರಮ, ವಿಜಯಪುರ.

-೨-

"ಬಸವ ಪರಂಪರೆಯ ಚಿತ್ತರಗಿ ಪೀಠದ ಪಟ್ಟಾಧಿಕಾರ ಮಹೋತ್ಸವದಲ್ಲಿ ಭಾಗವಹಿಸಿರುವುದು ನನ್ನ ಪುಣ್ಯ ವಿಶೇಷ. ಈ ಪೀಠದ ೧೯ನೇ ಅಧಿಪತಿಗಳಾದ ಶ್ರೀ ಮಹಾಂತಪ್ಪಗಳು ಮಾಡಿದ್ದು ಕಲ್ಯಾಣ ಕ್ರಾಂತಿಯ ಮುಂದುವರಿಕೆಯಾಗಿದೆ. ಇದು

ಬಸವ ತತ್ವಾಚರಣೆಯ ಕ್ರಾಂತಿಯಾಗಿದೆ. ಪೂಜ್ಯರು ಬಸವತತ್ವ-ಅನುಷ್ಠಾನದ ರೂವಾರಿಗಳು.

**-ಡಾ॥ ದೇ. ಜವರೇಗೌಡರು** ಮೈಸೂರು ವಿಶ್ವವಿದ್ಯಾಲಯದ ಮಾಜಿ ಕುಲಪತಿಗಳು.

-೩-

"ಚಿತ್ತರಗಿ ಪೀಠ - ಮಠ ಪರಂಪರೆಯಲ್ಲಿ ಇದು ಮಹಾಂತಪ್ಪಗಳ ಯುಗ, ಇದುಪ್ರಯೋಗ ಯುಗ. ಪೂಜ್ಯ ಮಹಾಂತಸ್ವಾಮಿಗಳು ಜಡವಾಗುತ್ತಲಿದ್ದ. ಶರಣ ಸಂಸ್ಕೃತಿಯ ಜಡತ್ವ ಕಳೆದು ಅದನ್ನು ಜಂಗಮ ಸಂಸ್ಕೃತಿಯನ್ನಾಗಿಸಿದರು. ಭಕ್ತವರ್ಗ ದಲ್ಲಿ ಜನಿಸಿದ ಶ್ರೀ ಸಿದ್ಧರಾಮ ಸ್ವಾಮಿಗಳು ನಿರಂಜನ ಜಂಗಮ ಸಂಸ್ಕಾರ ಪಡೆದು ಶ್ರೀ ಗುರುಮಹಾಂತ ಸ್ವಾಮಿಗಳಾದುದು ಇದು ಬಸವ ಪರಂಪರೆ, ಇದು ಮುಂದು-ವರೆದಾಗ ಭಕ್ತ-ಜಂಗಮ ಎಂಬ ಭಾವಭೇದ ತಾನಾಗಿಯೇ ಅಳಿಯುತ್ತದೆ."

**-ಡಾ॥ ಎಂ. ಎಂ. ಕಲಬುರ್ಗಿ** ಖ್ಯಾತ ಸಂಶೋಧಕರು,
ಕನ್ನಡ ವಿಶ್ವವಿದ್ಯಾಲಯ, ಹಂಪಿ- ವಿಶ್ರಾಂತ ಕುಲಪತಿಗಳು

-೪-

"ಬಸವ ಧರ್ಮವು ಸಮಾತನೆಯ ಧರ್ಮ, ಕಾಯಕದ ಧರ್ಮವಾಗಿದೆ. ಇಳಕಲ್ಲದಲ್ಲಿ ನಡೆಯುತ್ತಿರುವ ಈ ಪಟ್ಟಾಧಿಕಾರ ಮಹೋತ್ಸವವು ಸಮಾಜ ಪರಿವರ್ತನಾ ದೀಕ್ಷೆಯಾಗಿದೆ. ಕೂಡಲಸಂಗನ ಶರಣರು ಸ್ವತಂತ್ರ ಧೀರರು, ಪೂಜ್ಯ ಮಹಾಂತಸ್ವಾಮಿಗಳು ಈ ಯುಗದ ಮಹಾನ್ ಚೇತನ. ಅಂದು ಬಸವಣ್ಣನವರ ಎದುರಿಸಿದಂತೆ ಇಂದು ಮಹಾಂತಪ್ಪಗಳು ಪಟ್ಟಭದ್ರರ ಕೋಟಲೆಗಳನ್ನು ಎದುರಿಸಿ ಮುನ್ನಡೆದಿದ್ದಾರೆ. ಬಸವಭಕ್ತರು ಒಗ್ಗಟ್ಟಿನಿಂದ ಮಹಾಂತಪ್ಪಗಳೊಂದಿಗಿದ್ದು ಬಸವ-ತತ್ವದ ಜೀವಂತಿಕೆಯನ್ನು ರಕ್ಷಿಸಬೇಕಿದೆ."

**-ಶ್ರೀ ರಮಜಾನ್ ದರ್ಗಾ,** ಪ್ರಜಾವಾಣಿ ಪತ್ರಿಕೆ ಉಪಸಂಪಾದಕರು, ಗುಲಬರ್ಗಾ.

-೫-

"ಸ್ವಾಮಿಗಳು ಭಕ್ತರ ಸಂಬಂಧ ಒಂದು ರೀತಿಯಲ್ಲಿ ಮೀನು-ನೀರಿನ ಸಂಬಂಧ ವಿದ್ದಂತೆ. ನೀರಿನಿಂದ ಮೀನು ಹೊರಗೆ ತೆಗೆದರೆ ಅದು ಸಾಯುತ್ತದೆ. ಮೀನು ಇಲ್ಲದಿದ್ದರೆ ನೀರು ಕೆಡುತ್ತದೆ. ನೀರು ಹಾಗೂ ಮೀನು ಒಂದಕ್ಕೊಂದು ಪೂರಕ-

ವಾಗಿರುವಂತೆ ಭಕ್ತರು ಹಾಗೂ ಸ್ವಾಮಿಗಳು ಪರಸ್ಪರ ಪೂರಕವಾಗಿದ್ದರೆ ಸಮಾಜ ಪರಿಶುದ್ಧವಾಗಿರ್ತದೆ.

**-ಶ್ರೀ ಮ.ನಿ.ಪ್ರ. ಸಿದ್ಧರಾಮ ಸ್ವಾಮಿಗಳು** ರುದ್ರಾಕ್ಷಿಮಠ, ಬೆಳಗಾವಿ.

-೬-

"ಇಳಕಲ್ಲದಲ್ಲಿ ಇದು ಕೇವಲ ಸಿದ್ಧರಾಮ ಸ್ವಾಮಿಗಳನ್ನು-ಗುರುಮಹಾಂತ ಸ್ವಾಮಿಗಳನ್ನಾಗಿ ಮಾಡುವ ಪಟ್ಟಾಭಿಷೇಕ ಮಾತ್ರವಾಗಿರದೇ ಇದು ಬಸವತತ್ವದ ಪಟ್ಟಾಭಿಷೇಕವಾಗಿದೆ. ಇದು ಬಸವತತ್ವದ ವಿಜಯೋತ್ಸವವಾಗಿದೆ. ಇಂದು ಪೂಜ್ಯ ಮಹಾಂತಪ್ಪಗಳವರು ತಮ್ಮ ಉತ್ತರಾಧಿಕಾರಿ ಗುರುಮಹಾಂತ ಸ್ವಾಮಿಗಳಿಗೆ ಒಂದು ಕೈಯಲ್ಲಿ ಸೇವೆಯ ಕಸಬರಗಿ ಇನ್ನೊಂದು ಕೈಯಲ್ಲಿ ಸುಜ್ಞಾನದ ವಚನದೀಪ ನೀಡಿದ್ದಾರೆ. ನೂತನ ಶ್ರೀಗಳವರು ಸಮರ್ಥರಿದ್ದಾರೆ. ಭಕ್ತರ ಜನಮಾನಸ ಸ್ವಚ್ಛಗೊಳಿಸುವ ಜಂಗಮ ಕಾಯಕ ಮುನ್ನಡೆಸುತ್ತಾರೆ."

**-ಶ್ರೀ ಮ.ಘು.ಚ. ಬಸವಲಿಂಗ ಪಟ್ಟದ್ದೇವರು,** ಹಿರೇಮಠ ಸಂಸ್ಥಾನ ಭಾಲ್ಕಿ.

-೭-

"ಚಿತ್ತರಗಿ ಪೀಠದ ಈ ನಿರಂಜನ ಪಟ್ಟಾಧಿಕಾರ ಮಹೋತ್ಸವವು ಅದ್ಭುತವಾದ ಐತಿಹಾಸಿಕ ಸಾದೃಶ್ಯವನ್ನು ಹೊಂದಿದೆ. ಅಂದು ೧೨ನೇ ಶತಮಾನ ಇಂದು ೨೧ನೇ ಶತಮಾನವಾಗಿ, ಅಂಕಿಗಳು ಅದು ಬದಲಾಗಿ ಬಂದಿವೆ. ಅಂದು ಚೆನ್ನಬಸವಣ್ಣನವರು ಸಿದ್ಧರಾಮರಿಗೆ ಅನುಭವ ಮಂಟಪದಲ್ಲಿ ದೀಕ್ಷೆ ಇತ್ತರೆ, ಇಂದು ಅದೇ ಹೆಸರಿನ ಪಾಂಡೋಮಟ್ಟಿ ಚೆನ್ನಬಸವ ಸ್ವಾಮಿಗಳು ಸಿದ್ಧರಾಮಸ್ವಾಮಿಗಳಿಗೆ ದೀಕ್ಷೆಯಿತ್ತಿದ್ದಾರೆ. ಈ ಗುರುಮಹಾಂತರನ್ನು ಸಂರಕ್ಷಿಸುವ ಹೊಣೆ ಪೀಠದ ಭಕ್ತರದಾಗಿದೆ.

**-ಶ್ರೀ ಮ.ನಿ.ಪ್ರ.ಶಿವರುದ್ರ ಸ್ವಾಮಿಗಳು,** ಬೇಲಿಮಠ, ಬೆಂಗಳೂರು.

-೮-

"ಚಿತ್ತರಗಿ ಪೀಠದ ಪೂಜ್ಯ ಮಹಾಂತ ಸ್ವಾಮಿಗಳು ಇಂದು ಶ್ರೇಷ್ಠವಾದ ಸಿದ್ಧರಾಮ ಸ್ವಾಮಿಗಳೆಂಬ ರತ್ನವನ್ನು 'ಗುರುಮಹಾಂತ ಸ್ವಾಮಿ'ಗಳೆಂಬ ನೂತನ ಪೀಠಾಧಿಕಾರಿಯಾಗಿ ಪಡೆದಿದ್ದಾರೆ. ಶ್ರೀ ಮಹಾಂತಪ್ಪಗಳು ಸ್ವಯಂ ಪ್ರಕಾಶ ಜಂಗಮ, ಗುರುಮಹಾಂತಪ್ಪಗಳೂ ಸ್ವಯಂ ಪ್ರಕಾಶ ಜಂಗಮ ರತ್ನವಾಗಿದ್ದಾರೆ. ಬಸವ ಸಿದ್ಧಾಂತ ಅಪ್ಪಿಕೊಂಡರೆ ಯಾವ ರಾದ್ಧಾಂತ ಇರುವದಿಲ್ಲ. ಈ ಸತ್ಯ ಅರಿತುಕೊಂಡು

ಶಾಂತಿ-ಸೌಹಾರ್ದತೆ-ಸಹಬಾಳ್ವೆಯಿಂದ ನಾವೆಲ್ಲರೂ ಶರಣ ಪರಂಪರೆ ಮುಂದು-ವರೆಸಿಕೊಂಡು ಹೋಗಬೇಕಿದೆ.''

**-ಶ್ರೀ ಮನ್ನಿರಂಜನ ಜಗದ್ಗುರು ಪಂಚಮ ಶಿವಲಿಂಗೇಶ್ವರ ಸ್ವಾಮಿಗಳು,** ನಿಡಸೋಸಿ.

-೯-

''ಇಂದು ಸಿದ್ಧರಾಮ ಸ್ವಾಮಿಗಳು ಗುರುಮಹಾಂತ ಸ್ವಾಮಿಗಳಾಗಿದ್ದಾರೆ. ಅವರು ಮುರುಘಾಮಠದಲ್ಲಿದ್ದು ಸಾಧಕರಾಗಿ ಬೆಳೆದು ಬಂದವರು. ಇವರನ್ನು ಈ ಮಠಕ್ಕೆ ನಾವಾಗಿಯೇ ನೇಮಿಸಿಲ್ಲ. ನಾವು ಅವರನ್ನು ಮೈಸೂರು ಪ್ರಾಂತದಲ್ಲಿ ಬಸವತತ್ವ ಪ್ರಸಾರಕರಾಗಿ ಕಾರ್ಯನಿರ್ವಹಿಸಲೆಂದು ನಮ್ಮ ಮೈಸೂರಿನ ಮಹಾಲಿಂಗೇಶ್ವರ ಮಠಕ್ಕೆ ಕಳಿಸಿದ್ದೆವು. ಶ್ರೀ ಮಹಾಂತಪ್ಪಗಳು ಹಾಗೂ ಅವರ ಭಕ್ತರ ಸದಿಚ್ಛೆಯ ಒತ್ತಾಯಕ್ಕೆ ಒಪ್ಪಿಗೆಯನ್ನಿತ್ತೆವು. ಇಂದಿನ ಗುರುಮಹಾಂತ ಸ್ವಾಮಿಗಳು ಸೌಜನ್ಯಶೀಲರು, ಸುಶೀಲರು, ಕ್ರಿಯಾಶೀಲರು. ಅವರಿಂದ ಒಳ್ಳೆಯ ಕಾರ್ಯಗಳು ಜರುಗುವಂತಾಗಲಿ ಎಂದು ಶುಭ ಕೋರುತ್ತೇವೆ.''

**-ಪೂಜ್ಯ ಶ್ರೀ ಶಿವಮೂರ್ತಿ ಮುರುಘರಾಜೇಂದ್ರ ಶರಣರು,** ಚಿತ್ರದುರ್ಗ.

-೧೦-

''ನಾವು ಹಾಗೂ ನಮ್ಮ ಪೀಠದ ಸದ್ಭಕ್ತರು ಕೂಡಿಕೊಂಡು ಯೋಗ್ಯರೂ, ಸಮರ್ಥರೂ, ಬಸವಭಕ್ತಿ ಸಂಪನ್ನರೂ, ಸದುವಿನಯ ಸದಾಚಾರ ಸಂಪನ್ನರೂ ಆಗಿರುವ ಸಿದ್ಧರಾಮಸ್ವಾಮಿಗಳನ್ನು ಒತ್ತಾಯದಿಂದ ಒಪ್ಪಿಸಿ ನಮ್ಮ ಪೀಠಕ್ಕೆ ಉತ್ತರಾಧಿ-ಕಾರಿಗಳೆಂದು ಹೋದ ವರ್ಷ ಕರೆತಂದಿದ್ದು, ಇಂದು ಅವರು ಸರ್ವಪೂಜ್ಯರ- ಸದ್ಭಕ್ತರ ಸಮ್ಮುಖದಲ್ಲಿ ಜಂಗಮಸ್ಥಲ ಪಡೆದುಕೊಂಡು ಶ್ರೀ ಮ.ನಿ.ಪ್ರ. ಗುರುಮಹಾಂತ ಸ್ವಾಮಿಗಳೆಂದು ನೂತನ ಹೆಸರು ಪಡೆದು ಚಿತ್ತರಗಿ ಪೀಠದ ೨೦ನೇ ಅಧಿಪತಿ-ಗಳಾಗಿದ್ದಾರೆ. ಇವರನ್ನು ಚಿತ್ತರಗಿ ಪೀಠದ ಸಮಸ್ತ ಭಕ್ತರ ಉಡಿಯಲ್ಲಿ ನಾವಿಂದು ಹಾಕಿದ್ದೇವೆ. ತಾವೆಲ್ಲರೂ ಜೋಪಾನ ಮಾಡಿಕೊಂಡು ಹೋಗಿರಿ. ಕಲ್ಯಾಣದಪ್ಪಗಳು, ಚಿತ್ತರಗಿ ಶಿವಯೋಗಿಗಳು ಸರ್ವರಿಗೂ ಸದ್ಬುದ್ಧಿಯನ್ನಿತ್ತು ಸನ್ಮಂಗಳವನ್ನುಂಟು ಮಾಡಲಿ, ಸರ್ವರಿಗೂ ಶರಣಗಳು.''

**- ಚಿತ್ತರಗಿ ಪೀಠದ ೧೯ನೆಯ ಪೀಠಾಧಿಪತಿಗಳಾದ**

ಶ್ರೀ ಮ.ನಿ.ಪ್ರ. **ಮಹಾಂತ ಶಿವಯೋಗಿಗಳು,** ಚಿತ್ತರಗಿ-ಇಳಕಲ್ಲ.

-೧೧-

"ಚಿತ್ತರಗಿ ಪೀಠವು ಬಸವ ಪರಂಪರೆಯ ಅತ್ಯಂತ ಪವಿತ್ರ ಮತ್ತು ಮಹಾ-ತಪಸ್ವಿಗಳ ಪೀಠವಾಗಿದೆ. ಇಂತಹ ಪರಮಪವಿತ್ರ ಚಿತ್ತರಗಿ ಪೀಠದ ಕಿಂಕರನಾಗಿ ಸೇವೆಗೈಯುವ ಅವಕಾಶ ನನಗೆ ದೊರಕಿದ್ದು ನನ್ನ ಭಾಗ್ಯವೆಂದು ಭಾವಿಸಿದ್ದೇನೆ. ಇದು ನನಗೆ ಬಯಸದೇ ಬಂದ ಲಿಂಗ ಪ್ರಸಾದವಾಗಿದೆ. ಚಿತ್ತರಗಿ ಪೀಠದ ಸದ್ಭಕ್ತರ ಸೇವೆಗೈಯುವ ಮೂಲಕ ಅವರೆಲ್ಲರ ಕರುಣೆಯ ಕಂದನಾಗಿ, ಅವರ ಘನತೆಗೆ ಕುಂದು ಬರದಂತೆ ದುಡಿಯುತ್ತೇನೆ. ಈ ಪೀಠದ ಘನತೆ ಮತ್ತು ಗೌರವ ಹೆಚ್ಚಾಗುವಂತೆ ಸೇವೆ ಸಲ್ಲಿಸುತ್ತೇನೆ. 'ಬಾಗಿದ ತಲೆ ಮುಗಿದ ಕೈಯಾಗಿರಿಸು ಕೂಡಲಸಂಗಮದೇವಾ' ಸರ್ವರಿಗೂ ಶರಣ-ಶರಣಾರ್ಥಿ".

**-ಚಿತ್ತರಗಿ ಪೀಠದ ೨೦ನೆಯ ಪೀಠಾಧಿಪತಿಗಳಾದ**
**ಶ್ರೀ ಮ.ನಿ.ಪ್ರ. ಗುರುಮಹಾಂತ ಸ್ವಾಮಿಗಳು**, ಚಿತ್ತರಗಿ-ಇಳಕಲ್ಲ.

-೧೨-

"ಲಿಂಗಾಯತ ಧರ್ಮೇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆದಿಡ-ಬಹುದಾದ ಐತಿಹಾಸಿಕ ಪಟ್ಟಾಧಿಕಾರ ಮಹೋತ್ಸವವಿದು. ಅಘಟಿತ ಘಟನಾ-ಕಾರ್ಯ ಮಾಡಿದ ಈ ದಿನಮಾನದ ಹಿರಿಯ ಚೇತನ ಮಹಾಂತಸ್ವಾಮಿಗಳು, ಇದೊಂದು ನಮ್ಮ-ನಿಮ್ಮ ಜೀವಮಾನದ ಒಂದು ಐತಿಹಾಸಿಕ ಸಮಾರಂಭವಾಗಿದೆ.

ಈ ಪಟ್ಟಾಧಿಕಾರ ಮಹೋತ್ಸವ ಸಮಾರಂಭದ ಪೂರ್ವದಲ್ಲಿ ದಿನಾಂಕ ೩೦-೯-೨೦೦೪ ರಂದು ಇದೇ ಇಳಕಲ್ಲದಲ್ಲಿ ನಡೆದ ದುರ್ಘಟನೆ, ಕೆಲವು ವಿಘ್ನ ಸಂತೋಷಿಗಳು ಶ್ರೀ ಮಹಾಂತಸ್ವಾಮಿಗಳ ಮೇಲೆ ಹಲ್ಲೆ ಮಾಡಿದರು. ಮಾರಕಾಸ್ತ್ರ ಸೀಮೆಎಣ್ಣೆ, ಮೋಟಾರ ಟಾಯರ್, ಕಲ್ಲು, ಬಡಗಿಗೆಗಳಿಂದ ಲಾರಿಯಲ್ಲಿ ಬಂದಿದ್ದವರು ಮಠ ಹಾಳು ಮಾಡುವ ಗುರಿ ಹೊಂದಿ ಬಂದಿದ್ದರೆಂಬುದು ಸ್ಪಷ್ಟವಿದೆ. ಇವೆಲ್ಲ ಎಲ್ಲಿಂದ ಹೇಗೆ ಬಂದವು? ಸದ್ಭಕ್ತರಾದವರು ಹೀಗೆ ಮಾಡಲು ಸಾಧ್ಯವೇ? ಮಾಡುವುದು ಸರಿಯೆ?

ಮಹಾಂತಪ್ಪಗಳವರಿಗೆ, ಅವರ ಮೇಲೆ ಹಲ್ಲೆ ನಡೆದುದು ಬಹಳ ಅನ್ಯಾಯ ಆಯ್ತು. ಆದಾಗ್ಯೂ ಅವರು ಅದನ್ನು ಹೊಟ್ಟೆಯಲ್ಲಿ ಹಾಕಿಕೊಂಡರು. ಹಲ್ಲೆಯಾದ ನಂತರ ಉಂಟಾದ ಗಾಯಗಳಿಗೆ ಗದಗಿಗೆ ಬಂದು ತಜ್ಞವೈದ್ಯರಿಂದ ಔಷಧೋಪಚಾರ

ಹೊಂದಿದರು. ಈ ಘಟನೆಯನ್ನು ಬಸವ ಪ್ರಸಾದವೆಂದರು. ಹಲ್ಲೆ ಮಾಡಿದವರೂ ನಮ್ಮವರೇ ಎಂದು ವಿಶಾಲ ಹೃದಯ ತಾಳಿದರು. ತಮ್ಮ ದೈಹಿಕ-ಮಾನಸಿಕ ನೋವಿನ ನಡುವೆಯೂ, ಪೋಲೀಸರು ಬಂಧಿಸಿ ಬಳ್ಳಾರಿ ಜೈಲಿನಲ್ಲಿರಿಸಿದ್ದ ನೂರಾರು ಜನರನ್ನು ಭೆಟ್ಟಿಯಾಗಲು ಬಳ್ಳಾರಿಗೆ ಹೋಗಿಬಂದರು. ರಾಗ-ದ್ವೇಷಗಳ ಹಂತ ಮೀರಿನಿಂತವರು ಮಹಾಂತಪ್ಪಗಳು.

ನಮ್ಮ ಧರ್ಮ-ಮಠಪರಂಪರೆಯಲ್ಲಿ ಭಕ್ತ ವರ್ಗದಿಂದ ಬಂದಿರುವ ನೂರಾರು ಜನ ಗುರುವಿರಕ್ತ ಸ್ವಾಮಿಗಳು, ಪಟ್ಟದ್ದೇವರು, ಹಿಂದೆಯೂ ಆಗಿ ಹೋಗಿದ್ದಾರೆ, ಇಂದಿಗೂ ಇದ್ದಾರೆ. ಇದು ಐತಿಹಾಸಕ ಸತ್ಯ ಸಂಗತಿಯಾಗಿದೆ. ಚಿತ್ತರಗಿ ಸಂಸ್ಥಾನ ಮಠಕ್ಕೆ ಬಂದಿರುವ ಈ ಸಿದ್ಧರಾಮ ಸ್ವಾಮಿಗಳು ಅಂದರೆ ನೂತನ ಗುರುಮಹಾಂತ ಸ್ವಾಮಿಗಳು ಒಂದು ಅಪೂರ್ವ ರತ್ನ, ಚಿತ್ತರಗಿ ಪೀಠದ ಸದ್ಭಕ್ತರು ಯಾವುದೇ ವದಂತಿ, ಅಪ್ರಚಾರಗಳನ್ನು ನಂಬದೇ, ಚಾಡಿಕೋರರ ಮಾತುಗಳಿಗೆ ಕಿವಿಗೊಡದೇ ಪೂಜ್ಯರ ಮಾರ್ಗದರ್ಶನದಲ್ಲಿ ಮುನ್ನಡೆಯಬೇಕು.

- **ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು**
**ಡಾ. ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳವರು,** ಡಂಬಳ-ಗದಗ.

-೧೩-

“ಅಂದು ೧೨ನೇ ಶತಮಾನದಲ್ಲಿ ಮರ್ತ್ಯಲೋಕದ ಮಹಾಮನೆ ಹಾಳಾಗಿ ಹೋಗಬಾರದೆಂದು ಕರ್ತೃ ಪರಶಿವನು ಬಸವಣ್ಣನೆಂಬ ಶರಣನನ್ನು ಕಳಿಸಿದ್ದರೆ, ಇಂದು ೨೧ನೇ ಶತಮಾನದಲ್ಲಿ ಮರ್ತ್ಯಲೋಕದ ಮಹಾಮನೆ ದುರ್ವ್ಯಸನ, ದುರಾಚಾರ, ದುಶ್ಚಟ, ದುರ್ಗುಣ, ಜಾತೀಯತೆ, ಮೇಲು-ಕೀಳು, ಮುಂತಾದ ಅನಿಷ್ಟಗಳಿಂದ ಹಾಳಾಗಿ ಹೋಗಬಾರದೆಂದು ಕಲ್ಯಾಣದಪ್ಪ ಬಸವಣ್ಣ ‘ಮಹಾಂತ’ ಅಪ್ಪಗಳನ್ನು ಕಳಿಸಿದ್ದಾರೆ.

ಚಿತ್ತರಗಿ ಪೀಠವು ಬಸವಪರಂಪರೆಯ ಶರಣ ಸಿದ್ಧಾಂತದ ಅರಿವು-ಆಚಾರ-ಅನುಭಾವದ ಶೂನ್ಯಸಿಂಹಾಸನ ಪೀಠವಾಗಿದ್ದು, ೧೯ ಜನ ಪೀಠಾಧಿಪತಿಗಳು ಬಸವ ತತ್ವದ ಬೆಳಗನ್ನು ಹರಡಿದ್ದಾರೆ. ಪೂಜ್ಯರ ಈ ಪವಿತ್ರ ಜಂಗಮ ಕಾಯಕವನ್ನು ಮೆಚ್ಚಿಕೊಂಡು ಲಕ್ಷಾಂತರ ಭಕ್ತರು- ‘ಚಿತ್ತರಗಿ ಚಿಜ್ಯೋತಿ ಶ್ರೀ ವಿಜಯಮಹಾಂತಪ್ಪ, ಎಮ್ಮ ಬಾಳಿನ ಜ್ಯೋತಿ ನೀನೇ ಮಹಾಂತಪ್ಪ’ ಎಂದು ಭಕ್ತಿಯಿಂದ ನೆನೆಯುತ್ತಾರೆ. ಆದರೆ ಅಸೂಯಾಪರ ಜಾತಿವಾದಿ, ವೀರಶೈವ ಪುರೋಹಿತಶಾಹಿ ಮನಸ್ಸುಗಳು

'ಹಗಲು ಕಣ್ಣು ಕಾಣದ ಗೂಗೆ ರವಿ (ಸೂರ್ಯ)ಯನ್ನು ಬೈಯುವಂತೆ ಮಹಾಂತ ಅಪ್ಪಗಳಿಗೆ ಈ ಪೀಠಕ್ಕೆ ಬಂದಿಂದಿನಿಂದಲೂ ಒಂದಿಲ್ಲೊಂದು ರೀತಿಯಲ್ಲಿ ತೊಂದರೆ-ಕಿರುಕಳ-ನಿಂದೆ ನೀಡುತ್ತಲೇ ಬಂದಿದ್ದಾರೆ. ಪೂಜ್ಯರು ಈ ಸ್ತುತಿ ನಿಂದೆಗಳೆರಡನ್ನೂ ಮೀರಿ ನಿಂತ 'ಮಹಾಂತ'ರಾಗಿದ್ದಾರೆ.

ಅಜ್ಞಾನಿ ಸಮಾಜ ಸುಧಾರಿಸಬೇಕು, ಜನರನ್ನು ಬದುಕಿಸಬೇಕು ಎಂದು ಪ್ರಯತ್ನಿಸಿದ ಏಸುಕ್ರಿಸ್ತನಿಗೆ ಶಿಲುಬೆಗೇರಿಸಿತು. ಸಾಕ್ರೆಟಿಸನಿಗೆ ವಿಷವನುಣಿಸಿತು. ಪೈಗಂಬರರಿಗೆ ಮಕ್ಕಾದಿಂದ ಮದಿನಾಕ್ಕೆ ಕಳಿಸಿತು. ಬಸವಣ್ಣನವರನ್ನು ಕಲ್ಯಾಣದಿಂದ ಸಂಗಮಕ್ಕೆ ಗಡಿಪಾರು ಮಾಡಿತು. ಮಹಾತ್ಮಾಗಾಂಧಿಗೆ ಗುಂಡಿಕ್ಕಿತು. ಅದೇ ರೀತಿ ಮಹಾಂತಪ್ಪಗಳಿಗೆ ಕಲ್ಲು-ದೊಣ್ಣೆಗಳ ಏಟು ಕೊಟ್ಟಿತು.

'ಮಹಾಂತಪ್ಪಗಳ ಮೇಲೆ ೩೦-೦೮-೨೦೦೪ ರಂದು ನಡೆದ ಹಲ್ಲೆಯ ಬಗ್ಗೆ ಕೇಳಿದರೆ ಅಪ್ಪಗಳು ನಗುತ್ತಾ ಹೇಳುತ್ತಾರೆ- **"ಶರಣರೆ, ಆ ಕಲ್ಲು-ಬಡಿಗೆಗಳು ನಮ್ಮ ಲಿಂಗಯ್ಯನಿಗೆ ಪತ್ರೆ-ಪುಷ್ಪಗಳು ಅರ್ಪಿಸಿದಂತಾಯಿತು' ಇದು ನಿಜವಾದ ಪೂಜೆ, ಅವೆಲ್ಲಾ ಬಸವ ಮಹಾಪ್ರಸಾದ"** ಎಂದು ಅನ್ನುತ್ತಾರೆ. ಇಂತಹ ಪೂಜ್ಯರು ಬದುಕಿರುವ ಕಾಲದಲ್ಲಿ ಬದುಕಿರುವ ನಾವೇ ಭಾಗ್ಯವಂತರು ! ಎಂಬುದನ್ನು ಎಲ್ಲರೂ ಅರಿಯಬೇಕಿದೆ.

ಲಿಂ. ಶ್ರೀ ವಿಜಯಮಹಾಂತರ ವಾಣಿಯಂತೆ- **"ಕಷ್ಟಗಳೇ ನಮ್ಮ ಆತ್ಮೀಯ ಸಂಗಾತಿಗಳು, ಬಿಡು ಬಿಡು ಏತಕ್ಕೆ ಚಿಂತಿಸುವೆ ? ಹೆದರದಿರು, ನಡೆ ಮುನ್ನಡೆ, ಮುಂದೆ ಸಾಗು, ನಾನಿದ್ದೇನೆ, ಚಿಂತಿಸದಿರು, ಮಹಾಮಹಿಮ ಬಸವ ಶರಣರು ದಯೆಗೈಯುವರು."** ಇದು ಈ ಪೀಠದ ನಿಜವಾದ ಭಕ್ತರಿಗೆ ವಿಜಯಮಹಾಂತರ ಅಭಯವಾಣಿ.

**-ಪ್ರೊ. ಸಿದ್ಧಣ್ಣ ಲಂಗೋಟಿ** ಗೌ॥ ಸಂಪಾದಕರು, ಬಸವಬೆಳಗು
ಸಂಚಾಲಕರು, ಶರಣ ಸಿದ್ಧಾಂತ ವಿದ್ಯಾಪೀಠ.

ಈ ಐತಿಹಾಸಿಕ ಪಟ್ಟಾಧಿಕಾರ ಮಹೋತ್ಸವದ ಸ್ವಾಗತ ಸಮಿತಿಯ ಕಾರ್ಯಾಧ್ಯಕ್ಷರಾದ ಶ್ರೀ ಎಂ. ವ್ಹಿ. **ಪಾಟೀಲ** ಅವರಿಂದ ಸ್ವಾಗತ, ಸ್ವಾಗತ ಸಮಿತಿಯ ಅಧ್ಯಕ್ಷರಾದ ಶ್ರೀ **ಬಿ. ಎಸ್. ವಾಲಿ** ಹಾಗೂ ಪ್ರಧಾನ ಕಾರ್ಯದರ್ಶಿ ಶ್ರೀ **ಜಿ. ಪಿ. ಪಾಟೀಲ** ಅವರಿಂದ ಗ್ರಂಥ ಪುಷ್ಪಾರ್ಪಣೆ, ಶ್ರೀ **ಗುರಣ್ಣ ಮರಟದ** ಪ್ರಧಾನ ಕಾರ್ಯದರ್ಶಿಗಳಿಂದ ಶರಣು-ಸಮರ್ಪಣೆ, **ಡಾ. ಶಂಭು ಬಳಿಗಾರ** ಅವರಿಂದ

ಕಾರ್ಯಕ್ರಮದ ಸಂಚಾಲನೆ ಜರುಗಿತು. ಚಿತ್ತರಗಿ ಪೀಠದ ಸದ್ಭಕ್ತರು ಈ ಐತಿಹಾಸಿಕ ಪಟ್ಟಾಭಿಷೇಕದಲ್ಲಿ ಪಾಲ್ಗೊಂಡು ಧನ್ಯತೆಯನ್ನು ಅನುಭವಿಸಿದರು.

ಚಿತ್ತರಗಿ ಪೀಠದ **೨೦ನೇ** ಪೀಠಾಧಿಪತಿಯಾಗಿ, ಹಿರಿಯ ಪೂಜ್ಯರಾದ ೧೯ನೇ ಪೀಠಾಧಿಪತಿಗಳ ಕೃಪೆಗೆ ಪಾತ್ರರಾಗಿ, ಚಿತ್ತರಗಿ ಇಳಕಲ್ಲ ಸಂಸ್ಥಾನ ಮಠಕ್ಕೆ ಬಂದವರು ಪೂಜ್ಯರಾಜ ಶ್ರೀ ಗುರುಮಹಾಂತ ಸ್ವಾಮಿಗಳವರು.

ಈ ಪೂಜ್ಯರು ಪೂರ್ವಾಶ್ರಮದಲ್ಲಿ **ನರಗುಂದದ** ಲಿಂಗಾಯತ ಹೆಗಡಾಳ ಮನೆತನದ ಶರಣ ದಂಪತಿಗಳಾದ ಶರಣ ವೀರಪ್ಪನವರು ಹಾಗೂ ಶರಣೆ ಶಾಂತಮ್ಮ-ನವರ ಚಿದ್‌ಗರ್ಭದಲ್ಲಿ ೨೭-೫-೧೯೬೦ ರಂದು (ಬಸವ ಜಯಂತಿ ಸಂದರ್ಭ) ಜನಿಸಿದವರು. ಕಲಬುರ್ಗಿಯಲ್ಲಿರುವ ಗದ್ದುಗೆಮಠ ಹಾಗೂ ಹುಬ್ಬಳ್ಳಿಯ ಕಲಬುರ್ಗಿ ಮಠಗಳ ಅಧಿಪತಿಗಳಾಗಿದ್ದ ಶ್ರೀ ಮ.ನಿ.ಪ್ರ. ಶಿವಮೂರ್ತಿ ಸ್ವಾಮಿಗಳ ಭಕ್ತರು. ಈ ಮಗುವಿನ ಜನನವಾದ ನಂತರ ಪೂಜ್ಯರು **'ಶಿವನಾಗು, ಶಿವನಾಗಿ ಬಾಳು'** ಎಂದು ಆಶೀರ್ವದಿಸಿದ ಕಾರಣ ಮಗುವಿಗೆ **ಶಿವನಾಗಪ್ಪ** ಎಂದು ನಾಮಕರಣ ಮಾಡಿದರು. ಈ ಶರಣ ದಂಪತಿಗಳಿಗೆ ಐದು ಜನ ಮಕ್ಕಳು. ಧಾರವಾಡ ಮುರುಘಾಮಠದ ಪ್ರಸಾದ ನಿಲಯದಲ್ಲಿದ್ದು, ಪೂಜ್ಯ ಶ್ರೀ ಮಹಾಂತಪ್ಪಗಳವರಿಂದ ದೀಕ್ಷೆ ಪಡೆದು ಉನ್ನತ ಶಿಕ್ಷಣ ಓದಿದರು. ಶ್ರೀ ಶಿವನಾಗಪ್ಪ ಎಂ.ಎ. (ಇಂಗ್ಲೀಷ) ಎಲ್‌ಎಲ್.ಬಿ.; ಶಿವಯೋಗೆಪ್ಪ ಎಂ.ಕಾಂ.,ಎಲ್‌ಎಲ್.ಬಿ.; ರೇವಣಸಿದ್ಧಪ್ಪ ಎಂ.ಕಾಂ.,ಎಲ್‌ಎಲ್.ಬಿ; ಶಂಭುಲಿಂಗಪ್ಪ ಎಂ.ಕಾಂ.,ಎಲ್‌ಎಲ್.ಬಿ.,ಪಿಎಚ್.ಡಿ. ಓದಿದವರು. ಒಬ್ಬಳೇ ಮಗಳು ಕು. ಶಿವಶಂಕರಮ್ಮ ಪಿ.ಯು.ಸಿ. ಓದಿದ್ದಾರೆ. ಈ ರೀತಿ ಲಿಂಗಾಯತ ಹೆಗಡಾಳ ಮನೆತನದ ಐವರೂ ಮಕ್ಕಳು ಒಳ್ಳೆಯ ವಿದ್ಯಾವಂತರು, ಸುಸಂಸ್ಕೃತರು, ಬಸವಭಕ್ತರಾಗಿ ಬೆಳೆದರು.

**ಹಿರಿಯ ಮಗ ಶಿವನಾಗಪ್ಪ** ಧಾರವಾಡ ಮುರುಘಾಮಠದಲ್ಲಿದ್ದೇ ಅನೇಕ ಪೂಜ್ಯರ, ಶರಣರ, ಅನುಭಾವಿಗಳ ಪ್ರವಚನ, ಶಿವಾನುಭವ ಕೇಳುತ್ತ ಶಿವಾನುಭಾವಿ-ಯಾಗಿ ಸಹಜ ವೈರಾಗ್ಯ ತಾಳಿ **'ಶಿವದೇವರು'** ಎಂದು ಧಾರವಾಡ ಮುರುಘಾಮಠದ ಪೂಜ್ಯ ಮಹಾಂತಪ್ಪಗಳಿಂದ ಹೆಸರಿಸಲ್ಪಟ್ಟು ಅವರ ಅನುಗ್ರಹಕ್ಕೆ ಪಾತ್ರರಾದವರು. ಮುಂದೆ ಚಿತ್ರದುರ್ಗ ಜಗದ್ಗುರುಗಳ ಕೃಪೆಗೆ ಪಾತ್ರರಾಗಿ ಅವರಿಂದ ಚಿನ್ಮಯಾನುಗ್ರಹ ದೀಕ್ಷೆ ಪಡೆದು **ಶ್ರೀ ಸಿದ್ಧರಾಮ ಸ್ವಾಮಿಗಳು** ಎಂದು ಮರುನಾಮಕರಣಗೊಂಡರು. ಒಳ್ಳೆಯ ಉನ್ನತ ಶಿಕ್ಷಣ ಪಡೆದವರಾದ್ದರಿಂದ ಕನ್ನಡ, ಇಂಗ್ಲೀಷ ಭಾಷೆಗಳಲ್ಲಿ ಪ್ರಭುತ್ವ ಪಡೆದವರಾದ್ದರಿಂದ ಚಿತ್ರದುರ್ಗ ಜಗದ್ಗುರುಗಳೊಂದಿಗೆ ಇಂಗ್ಲೆಂಡ, ಅಮೇರಿಕಾ, ಜರ್ಮನ್, ಫ್ರಾನ್ಸ್, ಇಟಲಿ, ವೆಟಿಕನ್, ಸಿಂಗಾಪುರ ಮುಂತಾದ ದೇಶಗಳಿಗೆ ಹೋಗಿ

ಪೂಜ್ಯರ ಬಸವತತ್ವ ಪ್ರಸಾರದ ಮಹಾಮಣಿಹದಲ್ಲಿ ಅಳಿಲುಸೇವೆ ಸಲ್ಲಿಸಿ, ಮೆಚ್ಚುಗೆಗೆ ಕೃಪೆಗೆ ಪಾತ್ರರಾದರು.

ಚಿತ್ರದುರ್ಗ ಜಗದ್ಗುರುಗಳು ಸ್ಥಾಪಿಸಿದ್ದ ಬಸವತತ್ವ ಮಹಾವಿದ್ಯಾಲಯದ ಸಾಧಕರಿಗೆ, ಅಲ್ಲಿಯ ಶರಣ ಸಂಸ್ಕೃತಿ ಉತ್ಸವದ ಕಾರ್ಯಕ್ರಮಗಳಿಗೆ, ಸಹಜ ಶಿವಯೋಗ ಶಿಬಿರಗಳಿಗೆ, ವಚನ ಕಮ್ಮಟ ಪರೀಕ್ಷೆಗಳ ಸಂಘಟನೆಗೆ ಕ್ರಿಯಾಶೀಲವಾಗಿ ದುಡಿಯುತ್ತಾ ಅಪಾರ ಅನುಭವ ಪಡೆದರು. ಮೈಸೂರು ಪ್ರಾಂತದಲ್ಲಿ ಬಸವತತ್ವ ಪ್ರಸಾರಕರಾಗಿ (ಮಿಶನರಿಗಳಂತೆ) ಚರಜಂಗಮವಾಗಿ ಸೇವೆಸಲ್ಲಿಸಲೆಂದು ಚಿತ್ರದುರ್ಗ ಜಗದ್ಗುರು ಶ್ರೀ ಶಿವಮೂರ್ತಿ ಮುರಘರಾಜೇಂದ್ರ ಶರಣರು ಮೈಸೂರಿನಲ್ಲಿಯ ತಮ್ಮದೇ ಮಹಾಲಿಂಗೇಶ್ವರ ಮಠಕ್ಕೆ ಕಳಿಸಿದರು. ಆ ಭಾಗದಲ್ಲಿ - 'ತಂಗಾಳಿ ಪರಿಮಳ-ದೊಡಗೂಡಿ ಸುಳಿಯುವಂತೆ' ಪೂಜ್ಯರು ಬಸವತತ್ವ ಪ್ರಸಾರ, ಬಸವಕೇಂದ್ರಗಳ ಸ್ಥಾಪನೆ, ಮಕ್ಕಳಿಗೆ ವಚನಪಾಠ ಶಾಲೆಗಳನ್ನು ತೆರೆದು ಜಂಗಮ ಕಾಯಕ ಕೈಕೊಂಡಿದ್ದವರ ಮೇಲೆ ಚಿತ್ತರಗಿ-ಇಳಕಲ್ಲದ ಪೂಜ್ಯ ಮಹಾಂತಪ್ಪಗಳವರ ಲಿಂಗದೃಷ್ಟಿ ಹರಿಯಿತು. 'ಯಾವುದೇ ಮಠಕ್ಕೆ ಸ್ವಾಮಿಯಾಗಿ ಒಂದೆಡೆ ಸಂಪ್ರದಾಯಗಳಿಗೆ ಸಿಲುಕಿ, ಜಡವಾಗುವುದಕ್ಕಿಂತ ಸ್ವತಂತ್ರವಾಗಿದ್ದು 'ಕ್ರೀಯಾಶೀಲ ಜಂಗಮ' ವಾಗಿರುವುದೇ ಶ್ರೇಷ್ಠವೆಂದು ನಿರ್ಧರಿಸಿದವರನ್ನು ಒಲ್ಲೆ ಒಲ್ಲೆನೆಂದರೂ ಇಳಕಲ್ಲ ಪೂಜ್ಯ ಮಹಾಂತಪ್ಪಗಳು ಹಾಗೂ ಭಕ್ತರು ಚಿತ್ರದುರ್ಗ ಜಗದ್ಗುರುಗಳನ್ನು ಒತ್ತಾಯ ಪೂರ್ವಕ ಒಪ್ಪಿಸಿ, ಅವರೆಲ್ಲರ ಆದೇಶಕ್ಕೆ ತಲೆಬಾಗಿ, ಇಳಕಲ್ಲ ಮಹಾಂತಪ್ಪಗಳ ಮಾತೃಹೃದಯಕ್ಕೆ ಮಣಿದರು. ಇಳಕಲ್ಲ ಭಕ್ತರ ಬಸವ ಭಕ್ತಿಗೆ ಶರಣೆಂದು ಚಿತ್ತರಗಿ ಸಂಸ್ಥಾನಮಠ ಇಳಕಲ್ಲಕ್ಕೆ ಬಂದು, ಚಿತ್ತರಗಿ ಪೀಠದ ೨೦ನೆ ಅಧಿಪತಿಗಳಾದುದು ಶಿವನಿಚ್ಛೆ, ಗುರುಬಸವಣ್ಣನ ಇಚ್ಛೆ, ಶ್ರೀ ವಿಜಯಮಹಾಂತೇಶನ ಇಚ್ಛೆಯಾಗಿತ್ತೇನೋ ! ಮಂದ ಬುದ್ಧಿಯ ಅಜ್ಞಾನಿ ಮಾನವರಿಗಿದು ಅರ್ಥವಾಗಲಾರದು!

## ೪೨. ಶ್ರೀ ಗುರುಮಹಾಂತ ಸ್ವಾಮಿಗಳು ಆಸ್ಟ್ರೇಲಿಯಾಕ್ಕೆ :

ಚಿತ್ತರಗಿ ಸಂಸ್ಥಾನಮಠ ಇಳಕಲ್ಲಕ್ಕೆ ಅಧಿಪತಿಗಳಾದ ನಂತರ ಪೂಜ್ಯ ಗುರು ಮಹಾಂತ ಸ್ವಾಮಿಗಳು ಪೂಜ್ಯ ಶ್ರೀ ಮಹಾಂತ ಶಿವಯೋಗಿಗಳ ಸೇವೆಯಲ್ಲಿ ನಿರತರಾದರು. ಹಿರಿಯ ಗುರುಗಳು ಆಗಾಗ ಅನಾರೋಗ್ಯಕ್ಕೆ ಒಳಗಾದ ಸಂದರ್ಭದಲ್ಲಿ, ಬಾಗಲಕೋಟೆ ಡಾ|| ಬಸವರಾಜ ಕೆರೂಡಿ ಆಸ್ಪತ್ರೆ, ಬೆಳಗಾವಿಯ ಕೆಎಲ್ಇ ಆಸ್ಪತ್ರೆ, ಹುಬ್ಬಳ್ಳಿಯ ಎಂ. ಎಂ. ಜೋಶಿ ಕಣ್ಣಿನ ಆಸ್ಪತ್ರೆಗಳಲ್ಲಿ ಚಿಕಿತ್ಸೆ ಪಡೆಯುವಾಗಲೆಲ್ಲಾ ಹಿರಿಯ ಗುರುಗಳನ್ನು ತಾಯಿಯು ಮಗುವನ್ನು ಜೋಪಾನ ಮಾಡುವಂತೆ ಹಗಲಿರುಳು

ನೋಡಿಕೊಂಡರು, ದಾದಿಯಂತೆ ಶೂಶ್ರೂಷೆ ಮಾಡಿದರು. ಹಿರಿಯ ಪೂಜ್ಯರಿಗೆ ಹೃದಯ ಚಿಕಿತ್ಸೆಯಾದಾಗಲಂತೂ ತಿಂಗಳಾನುಗಟ್ಟಲೇ ಆಸ್ಪತ್ರೆಯಲ್ಲಿ ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ನಿದ್ದೆಗೆಟ್ಟು ಸೇವೆ ಮಾಡಿ, ಪೂಜ್ಯರನ್ನು ಭಕ್ತರ ಕಲ್ಯಾಣಕ್ಕಾಗಿ ಉಳಿಸಿಕೊಂಡರು. ಪೂಜ್ಯ ಗುರುಮಹಾಂತ ಸ್ವಾಮಿಗಳು **'ಸೇವೆಯಿಂದ ಸ್ವಾಮಿತ್ವ'** ಎಂಬ ಅನುಭವದ ನಾಣ್ಣುಡಿಗೆ ನಿದರ್ಶನವಾಗಿದ್ದಾರೆ.

ಬಸವತತ್ವ ಪ್ರಸಾರಕ್ಕಾಗಿ ವಿದೇಶಗಳಿಂದ ಎಷ್ಟೇ ಆವ್ಹಾನಗಳು ಬಂದರೂ ಸ್ವೀಕರಿಸಲಿಲ್ಲ. ಅಜ್ಞಾನಿ, ತಿಳಿವಳಿಕೆ ಇಲ್ಲದ ಕೆಲವು ಭಕ್ತರಿಂದ ಹಿರಿಯ ಗುರುಗಳಾದ 'ಶ್ರೀ ಮಹಾಂತ ಶಿವಯೋಗಿಗಳ ಮೇಲೆ ಹಲ್ಲೆಯಾದಾಗ, ಅವರನ್ನು ಕಾಪಾಡಿ, ವೈದ್ಯಕೀಯ ಚಿಕಿತ್ಸೆಗೆ ಒಪ್ಪಿಸಿ, ಸೇವೆ ಮಾಡಿ ಉಳಿಸಿಕೊಂಡರು. ಗುರುವಿನ ಸೇವೆಗೆ, ಗುರುವಿನ ಬಸವತತ್ವಾದರ್ಶಗಳಿಗೆ ಅರ್ಪಿಸಿಕೊಂಡಿದ್ದಾರೆ. ಹಿರಿಯ ಶ್ರೀಗಳು ಸಂಪೂರ್ಣ ಗುಣಮುಖರಾದ ನಂತರ, ಅವರ ಆದೇಶಕ್ಕೆ, ಅಪ್ಪಣೆಗೆ, ಗುರುವಾಕ್ಯ ಮೀರಬಾರದೆಂದು ಎಪ್ರಿಲ್ ೨೦೦೬ ನೇ ಇಸ್ವಿಯಲ್ಲಿ ಬಸವತತ್ವ ಪ್ರಸಾರಕ್ಕಾಗಿ **ಆಸ್ಟ್ರೇಲಿಯಾ ಖಂಡದ** ದೇಶಗಳಿಗೆ ಚರಜಂಗಮವಾಗಿ ಹೋಗಲು ಒಪ್ಪಿಕೊಂಡರು. ಚಿತ್ತರಗಿ ಪೀಠದ ಪರಂಪರೆಯ ಶ್ರೀಗಳೆಲ್ಲರೂ ಶಿವಾನುಭವ ಚರವರ್ಯರಾಗಿಯೇ ನಾಡನ್ನೆಲ್ಲಾ ಸಂಚರಿಸಿ ಜಂಗಮ ಜ್ಯೋತಿಯಾಗಿ ಬೆಳಗಿದವರು.

ಹಿರಿಯ ಪೂಜ್ಯರ ಆಣತಿಯಂತೆ ೨೦೦೬ನೇ ಎಪ್ರಿಲ್-ಮೇ ತಿಂಗಳಲ್ಲಿ ೪೦ ದಿನಗಳ ಕಾಲ ಆಸ್ಟ್ರೇಲಿಯಾ, ನ್ಯೂಜಿಲ್ಯಾಂಡ, ಸಿಂಗಾಪುರ ದೇಶಗಳಲ್ಲಿಯ ಅಡಿಲೇಡ್, ಕ್ಯಾನಬೆರಾ, ಸಿಡ್ನಿ, ಬ್ರೆಸ್‌ಬೇನ್, ಆಕ್ಲಂಡ, ಸಿಂಗಾಪೂರ ಮಹಾನಗರ ಮುಂತಾದ ಪ್ರಾಂತಗಳಲ್ಲಿ, ಅಲ್ಲಿಯ ಸಂಘಟನೆಗಳಲ್ಲಿ ಭಕ್ತರ ಮನೆಗಳಲ್ಲಿ ಬಸವಜಯಂತಿ ಆಚರಿಸಿ, ಬಸವ ಸಂದೇಶ ಸಾರಿದರು. ೧೦೦ ಜನರಿಗೆ ಲಿಂಗಧಾರಣೆ-ದೀಕ್ಷೆ ಮಾಡಿದರು. ಅದರಲ್ಲಿ ಮೂವರು ಕ್ರಿಶ್ಚಿಯನ ಪ್ರಾಧ್ಯಾಪಕರು, ವಿಜ್ಞಾನಿಗಳೂ ಲಿಂಗ ಸಂಸ್ಕಾರ ಪಡೆದಿರುವುದು ವಿಶೇಷವಾಗಿದೆ. ಈ ರೀತಿಯಾಗಿ ಚಿತ್ತರಗಿ ಪೀಠದ ಚಿಜ್ಯೋತಿಯು (ಲಿಂ. ವಿಜಯ ಮಹಾಂತಪ್ಪಗಳು) ಬಸವಜ್ಯೋತಿಯಾಗಿ (ಹಿರಿಯ ಶ್ರೀಗಳಾದ ಡಾ. ಮಹಾಂತಪ್ಪಗಳು), ಜಗಜ್ಯೋತಿಯಾಗಿ ಬಸವ ಬೆಳಕಾಗಿ ಜಗವನ್ನೆಲ್ಲಾ ಬೆಳಗುವುದ-ರಲ್ಲಿ ಯಾವ ಸಂಶಯವೂ ಇಲ್ಲ. ಇಂತಹ ಹಿರಿಯ ಶ್ರೀಗಳನ್ನು, ಕಿರಿಯ ಶ್ರೀಗಳನ್ನು ಏಕಕಾಲಕ್ಕೆ ದರ್ಶನ ಪಡೆಯುವ, ಅವರ ಅನುಭಾವ ಆಲಿಸುವ, ಪಾದೋದಕ-ಪ್ರಸಾದಕ್ಕೆ ಪಾತ್ರರಾಗುವ ಭಾಗ್ಯ ಇಂದಿನ ಚಿತ್ತರಗಿ ಪೀಠದ ಸಮಸ್ತ ಭಕ್ತರಿಗೆ ದೊರಕಿರುವುದು ಅವರೆಲ್ಲರ ಪೂರ್ವಜನ್ಮದ ಸುಕೃತದ ಫಲವೆಂದೇ ಹೇಳಬಹುದು.

೪೩. **ಚಿತ್ತರಗಿ ಸಂಸ್ಥಾನಮಠ ಇಳಕಲ್ಲದ ಸೇವಾ-ಸಾಧನೆ :**

ಪರಮಪೂಜ್ಯ ಶ್ರೀ ಮ.ನಿ.ಪ್ರ. ಗುರುಮಹಾಂತ ಸ್ವಾಮಿಗಳವರು ಚಿತ್ತರಗಿ ಶ್ರೀ ವಿಜಯಮಹಾಂತೇಶ್ವರ ಸಂಸ್ಥಾನಮಠಕ್ಕೆ ೨೦ನೇ ಪೀಠಾಧಿಪತಿಗಳಾಗಿ ಬಂದ ನಂತರ ಕ್ರಿ.ಶ. ೨೦೦೪ ರಿಂದ ಹಿರಿಯ ಪೂಜ್ಯರಾದ ಶ್ರೀ ಮ.ನಿ.ಪ್ರ. ಡಾ. ಮಹಾಂತ ಶಿವಯೋಗಿಗಳವರ ಮಾರ್ಗದರ್ಶನದಲ್ಲಿ ಬಸವತತ್ವ ಪ್ರಸಾರದ ಮಹಾಮಣಿಹವನ್ನು ಮುನ್ನಡೆಸಿಕೊಂಡು ಹೊರಟಿದ್ದಾರೆ. ಪೂಜ್ಯರ ಜನ್ಮದಿನವನ್ನು ಅಂದರೆ ಅಗಷ್ಟ ೧ನೇ ದಿನಾಂಕವನ್ನು **'ವ್ಯಸನ ಮುಕ್ತ ದಿನಾಚರಣೆ'** ಯಾಗಿ ಆಚರಣೆ ಪ್ರಾರಂಭಿಸಿದ್ದಾರೆ.

ಪ್ರತಿದಿನ ಇಳಕಲ್ಲ ನಗರದ ಐದು ಮನೆಗಳಿಗೆ ಬೆಳಿಗ್ಗೆ ಪಾದಯಾತ್ರೆ ಮಾಡುತ್ತಾ ಹೋಗಿ, ಎಲ್ಲ ಸಮಾಜದ ಬಂಧುಗಳ ಸುಖ-ದುಃಖ ಆಲಿಸಿ, ಮಹಾಂತ ಜೋಳಿಗೆ ಕಾರ್ಯಕ್ರಮ ಮಾಡಿದ್ದಾರೆ.

**ಹುನಗುಂದ ಮಠದಲ್ಲಿ** ಪ್ರತಿ ಹುಣ್ಣಿವೆಗೆ ಶಿವಾನುಭವ ಗೋಷ್ಠಿ ಪ್ರಾರಂಭಿಸಿ, ಐದಾರು ಸಾವಿರ ಜನರಿಗೆ ಪ್ರಸಾದ ದಾಸೋಹ ಜರುಗುವಂತೆ ಮಾಡಿದ್ದಾರೆ.

ಪರಮಪೂಜ್ಯ ಶ್ರೀ **ವಿಜಯಮಹಾಂತ ಶಿವಯೋಗಿಗಳವರ ಲಿಂಗೈಕ್ಯ ಶತಮಾನೋತ್ಸವ** ಕ್ರಿ.ಶ. ದಿನಾಂಕ ೨೦-೦೭-೨೦೧೨ ರಿಂದ ೧೬-೦೪-೨೦೧೨ರ ವರೆಗೆ ವೈಭವ ಪೂರ್ಣವಾಗಿ ಹಮ್ಮಿಕೊಂಡು- ನೇಕಾರ ಗೋಷ್ಠಿ ಆಯೋಜಿಸಿ, ೧೦೦ ಜನ ನೇಕಾರ ದಂಪತಿಗಳಿಗೆ ಗೌ॥ ಸತ್ಕಾರ; ಸೈನಿಕ ಗೋಷ್ಠಿ ಆಯೋಜನೆ ಮಾಡಿ ೧೦೦ ಜನ ಸೈನಿಕರಿಗೆ, ಹುತಾತ್ಮ ಸೈನಿಕರ ವಿಧವಾ ಪತ್ನಿಯರಿಗೆ ಗೌರವ ಸತ್ಕಾರ; ಸಮಾಜ ಪರಿವರ್ತನಾ ಗೋಷ್ಠಿ ಜರುಗಿಸಿ ಮಹಾಂತ ಜೋಳಿಗೆಗೆ ದುಶ್ಚಟ ನೀಡಿ ಉದ್ಧಾರವಾದ ೧೦೦ ಕುಟುಂಬಗಳ ಜನರಿಗೆ ಗೌ॥ ಸತ್ಕಾರ, ಬಸವತತ್ವ ಪ್ರಕಾರ ಮದುವೆಯಾದ ೧೦೦ (ಅಂತರ್ಜಾತೀಯ ವಿವಾಹವಾದ) ದಂಪತಿಗಳಿಗೂ ಗೌ॥ ಸತ್ಕಾರ; ರೈತ ಗೋಷ್ಠಿ ಏರ್ಪಡಿಸಿ ಆದರ್ಶರಾಗಿರುವ ೧೦೦ ಜನ ರೈತ ದಂಪತಿಗಳಿಗೆ ಗೌ॥ ಸತ್ಕಾರ ಹಾಗೂ ಪ್ರತಿ ಕುಟುಂಬಕ್ಕೆ ಒಂದು ಆಕಳಂತೆ ೧೦೦ ಆಕಳುಗಳನ್ನು ದಾಸೋಹ ನೀಡಿದ್ದಾರೆ. ಜಾನಪದ ಗೋಷ್ಠಿ ಏರ್ಪಡಿಸಿ ೧೦೦ ಜನ ಪುರುಷ ಜನಪದ ಕಲಾವಿದರು ಹಾಗೂ ೧೦೦ ಜನ ಮಹಿಳಾ ಕಲಾವಿದರಿಗೆ ಗೌ॥ ಸತ್ಕಾರ ಮಾಡಿದ್ದಾರೆ.

ವಿಶ್ವ ಬಸವ ಧರ್ಮ ಗೋಷ್ಠಿ ಏರ್ಪಡಿಸಿ, ಎಲ್ಲ ಧರ್ಮಗಳ ೧೫೦ ಧರ್ಮ-ಗುರುಗಳ ಸಮಾವೇಶ ಮಾಡಿ ಅವರಿಗೆ **'ಭಾರತ ಸಂವಿಧಾನ ಗ್ರಂಥ'** ಹಾಗೂ **'ಬಸವಣ್ಣನವರ ವಚನಗಳ ಧರ್ಮಗ್ರಂಥ'** ನೀಡಿ ಗೌರವಿಸಿದ್ದಾರೆ.

ಹತ್ತುಸಾವಿರ 'ಬಸವಣ್ಣನವರ ವಚನ' ಪುಸ್ತಕ ಪ್ರಕಟಿಸಿ, ಹತ್ತು ಸಾವಿರ ಜನರಿಗೆ ನೀಡಿ, ಅವರೆಲ್ಲರೂ ಅದನ್ನು ಬೆನ್ನಿಗೆ ಕಟ್ಟಿಕೊಂಡು **'ಓಂ ಶ್ರೀಗುರು ಬಸವಲಿಂಗಾಯ ನಮಃ'** ಎಂಬ ಗುರುಮಂತ್ರ ಪಠಣದೊಂದಿಗೆ ವಚನಯಾತ್ರೆ ಮಾಡಿಸಿದ್ದಾರೆ.

ಬಸವತತ್ವ ಪ್ರಕಾರ ೧೦೦ ಜೋಡಿ ಕಲ್ಯಾಣಮಹೋತ್ಸವ ಜರುಗಿಸಿದ್ದಾರೆ. ವಚನ ಸಾಹಿತ್ಯದ ರಥೋತ್ಸವ, ವಚನಗ್ರಂಥದ ಅಡ್ಡಪಲ್ಲಕ್ಕಿ ಮಹೋತ್ಸವ ಜರುಗಿಸಿ **ಇಳಕಲ್ಲ ಮಠದ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆದಿಡುವಂತೆ ಐತಿಹಾಸಿಕ ದಾಖಲೆಯ ಜಂಗಮ ಕಾಯಕ ಮಾಡಿದ್ದಾರೆ.**

ಇಂತಹ ಪೂಜ್ಯರು ಚಿತ್ತರಗಿ ಪೀಠಕ್ಕೆ ದೊರಕಿದ್ದು ಶ್ರೀಮಠದ ಭಕ್ತರ ಪುಣ್ಯ ವಿಶೇಷವಾಗಿದೆ.

**ಅಕ್ಕನಬಳಗದ ಅಮೃತ ಮಹೋತ್ಸವ :**

ನಿರಂಜನ ಶರಣ ಹರ್ಡೇಕರ ಮಂಜಪ್ಪನವರುಸಮಾಜದ ಮಹಿಳೆಯರ ಜಾಗೃತಿಗಾಗಿ ೧೯೩೫ ದವನದ ಹುಣ್ಣಿವೆಯಂದು **'ಅಕ್ಕನ ಬಳಗ'** ಪ್ರಾರಂಭಿಸಿ ತನ್ಮೂಲಕ ಅಕ್ಕಮಹಾದೇವಿ ಜಯಂತಿಗೆ ಚಾಲನೆ ಕೊಟ್ಟರು. ಅವರ ಪ್ರೇರಣೆಯಿಂದಾಗಿ ಇಳಕಲ್ಲ ಶ್ರೀ ವಿಜಯಮಹಾಂತೇಶ್ವರ ಸಂಸ್ಥಾನ ಮಠದಲ್ಲಿ ೧೯೫೬ ನೇ ಇಸ್ವಿ ದವನದ ಹುಣ್ಣಿವೆಯಂದು ಅಕ್ಕನಬಳಗ ಸ್ಥಾಪನೆಗೊಂಡಿತು. ಅಂದಿನ ಹಿರಿಯ ಸದಸ್ಯೆಯರಾದ ಶ್ರೀಮತಿ ಮಲಕಾಜಮ್ಮ ಪಟ್ಟಣಶೆಟ್ಟಿ, ಶ್ರೀಮತಿ ಕಳಕಮ್ಮ ದೋಟಿಹಾಳ ಇವರು ಆರ್ಥಿಕ ಸಹಾಯ ನೀಡಿದರು. ಶರಣೆ ಚೆನ್ನಮ್ಮ ಪಟ್ಟಣಶೆಟ್ಟಿ ಅವರು ಅಕ್ಕಮಹಾದೇವಿ ಮೂರ್ತಿ ಮಾಡಿಸಿ, ಅಕ್ಕನಬಳಗದಲ್ಲಿ ಸ್ಥಾಪಿಸಿದರು. ಶರಣೆಯರಾದ ಪಾರ್ವತಮ್ಮ ಹರಿಹರ, ಶಿವಗಂಗಮ್ಮ ಕಲ್ಮಠ, ಕಮಾಲಕ್ಷಮ್ಮ ಹರಿಹರ, ಶಿವಮ್ಮ ಅಂಗಡಿ ಇವರ ಸಹಕಾರದಿಂದ ಸಂಸ್ಥೆ ಬೆಳೆದಿದೆ. ೧೯೫೬ ರಿಂದ ೧೯೫೫ರ ವರೆಗೆ ಶ್ರೀಮತಿ ಚೆನಬಸಮ್ಮ ಕವಿಶೆಟ್ಟಿ ಅಧ್ಯಕ್ಷರಾಗಿ ಶ್ರೀಮತಿ ಶಿವಗಂಗಮ್ಮ ಕಲ್ಮಠ ಖಜಾಂಚಿಯಾಗಿ, ಶ್ರೀಮತಿ ಕಮಲಮ್ಮ ಹರಿಹರಕಾರ್ಯದರ್ಶಿಗಳಾಗಿ ಕಾರ್ಯ ನಿರ್ವಹಿಸಿದ್ದಾರೆ. ೧೯೫೫ ರಿಂದ ೨೦೦೮ರ ವರೆಗೆ ಶ್ರೀಮತಿ ವಿಜಯಲಕ್ಷ್ಮಿ ಶಿವಬಲ್ಲ ಅಧ್ಯಕ್ಷರಾಗಿ, ಶ್ರೀಮತಿ ಶಿವಗಂಗಮ್ಮ ಕಲ್ಮಠ ಖಜಾಂಚಿಯಾಗಿ ಶ್ರೀಮತಿ ಪಾರ್ವತಿ ಹರಿಹರ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸಿದ್ದಾರೆ. ೨೦೦೮ ರಿಂದ ೨೦೧೦ರ ವರೆಗೆ ಶ್ರೀಮತಿ ಅಕ್ಕಮಹಾದೇವಿ ಪಟ್ಟಣಶೆಟ್ಟಿ ಅಧ್ಯಕ್ಷರಾಗಿ ಶ್ರೀಮತಿ ಅನಸೂಯಾ ಅಂಗಡಿ ಖಜಾಂಚಿಯಾಗಿ, ಶ್ರೀಮತಿ ದಾಕ್ಷಾಯಣಿ ಅಕ್ಕಿ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸಿದ್ದಾರೆ. ೨೦೧೦ ರಿಂದ ೨೦೧೨ರ ವರೆಗೆ ಶ್ರೀಮತಿ ಶಕುಂತಲಾ

ಚೋಬಾರಿ ಅಧ್ಯಕ್ಷರಾಗಿ, ಶ್ರೀಮತಿ ಅನುಪಮಾ ಗೊಂಗಡಶೆಟ್ಟಿ ಖಜಾಂಚಿಯಾಗಿ, ಶ್ರೀಮತಿ ಗಿರಿಜಾ ಶಿವಬಲ್ಲ ಕಾರ್ಯದರ್ಶಿಯಾಗಿ ಕಾರ್ಯ ಮಾಡಿದ್ದಾರೆ. ೨೦೧೨ ರಿಂದ ೨೦೧೪ರ ವರೆಗೆ ಶ್ರೀಮತಿ ಹಂಪಕ್ಕ ಮರಟದ ಅಧ್ಯಕ್ಷರಾಗಿ, ಶ್ರೀಮತಿ ರಾಜೇಶ್ವರಿ ಹರಿಹರ ಖಜಾಂಚಿಯಾಗಿ, ಶ್ರೀಮತಿ ಸವಿತಾ ಗೊಂಗಡಶೆಟ್ಟಿ ಕಾರ್ಯ-ದರ್ಶಿಯಾಗಿ ಕಾರ್ಯ ನಿರ್ವಹಿಸಿದ್ದಾರೆ.

ಕ್ರಿ.ಶ. ೨೦೧೪ ರಿಂದ ೨೦೧೬ ಈ ಅವಧಿಯಲ್ಲಿ ಶ್ರೀಮತಿ ವಿಜಯಲಕ್ಷ್ಮಿ ಹರಿಹರ ಅಧ್ಯಕ್ಷರಾಗಿ, ಶ್ರೀಮತಿ ಮಹಾಂತೇಶ್ವರಿ ಸೂಡಿ ಖಜಾಂಚಿಯಾಗಿ, ಶ್ರೀಮತಿ ದಾನಮ್ಮ ಅಂಗಡಿ ಕಾರ್ಯದರ್ಶಿಯಾಗಿ ಕಾರ್ಯ ಮಾಡುತ್ತಿದ್ದಾರೆ. ಇದೇ ೨೦೧೬ ಎಪ್ರಿಲ್ ೧೭, ೧೮, ೧೯ ರಂದು ಮೂರು ದಿನಗಳ ಕಾಲ **ಅಕ್ಕನಬಳಗದ ಅಮೃತ ಮಹೋತ್ಸವವನ್ನು** ಶ್ರೀಮಠದಲ್ಲಿ ವೈಭವಪೂರ್ಣವಾಗಿ ಆಚರಿಸಲಾಯಿತು. ಪೂಜ್ಯ ಶ್ರೀ ಡಾ. ಮಹಾಂತ ಶಿವಯೋಗಿಗಳವರ ಸನ್ನಿಧಾನ ಹಾಗೂ ಪೂಜ್ಯ ಶ್ರೀ ಗುರು ಮಹಾಂತ ಸ್ವಾಮಿಗಳು ಅಧ್ಯಕ್ಷತೆ ವಹಿಸಿದ್ದರು. ಶರಣೆ ಡಾ. ಕಲ್ಯಾಣಮ್ಮ ಲಂಗೋಟಿ ಶರಣ ಸಾಹಿತಿಗಳು ರಾಮದುರ್ಗ ಇವರು ಉದ್ಘಾಟನೆ ಮಾಡಿದರು. ಶರಣೆಯರಾದ ಡಾ. ಜಯಶ್ರೀ ದಂಡೆ ಕಲಬುರ್ಗಿ, ಡಾ. ಮೀನಾ ಚಂದಾವರಕರ ವಿಜಯಪುರ, ಶರಣೆ ಪ್ರೇಮಕ್ಕ ಅಂಗಡಿ ಬೈಲಹೊಂಗಲ ಅತಿಥಿಗಳಾಗಿ ಆಗಮಿಸಿ 'ಮಹಿಳಾ ಜಾಗೃತಿ' ಕುರಿತು ಅನುಭಾವ ನೀಡಿದರು. ೬೦ ಜನ ವಿಧವಾತಾಯಂದಿರಿಗೆ, ೬೦ ಜನ ಪ್ರತಿಭಾನ್ವಿತ ವಿದ್ಯಾರ್ಥಿನಿಯರಿಗೆ, ೬೦ ಜನ ಮಹಿಳಾ ಸಾಧಕಿಯರಿಗೆ ಅಕ್ಕನಬಳಗದ ಪರವಾಗಿ ಪೂಜ್ಯರು ಗೌರವ ಸನ್ಮಾನ ಮಾಡಿದರು.

ಅಮೃತ ಮಹೋತ್ಸವದ ಸಂಸ್ಮರಣೆಗಾಗಿ- ಶರಣೆ ಗಿರಿಜಾದೇವಿ ಶಿವಬಲ್ಲ ಅವರ ಸಂಪಾದಕತ್ವದಲ್ಲಿ, ಪೂಜ್ಯ ಶ್ರೀಗಳವರ ಮಾರ್ಗದರ್ಶನದಲ್ಲಿ ಹಾಗೂ ಪ್ರೊ. ಸಿದ್ಧಣ್ಣ ಲಂಗೋಟಿ ಅವರ ಗೌರವ ಸಂಪಾದಕತ್ವದಲ್ಲಿ **'ಅಮೃತ ಬೆಳಸು'** ಎಂಬ ಸ್ಮರಣ ಗ್ರಂಥವನ್ನು ಪ್ರಕಾಶನ ಗೊಳಿಸಲಾಯಿತು.

ಈ ಅಕ್ಕನಬಳಗದ ಅಮೃತ ಮಹೋತ್ಸವ ಸಮಾರಂಭದ ಹಿಂದಿನ ಶಕ್ತಿಯಾಗಿ ಪೂಜ್ಯಶ್ರೀ ಮ.ನಿ.ಪ್ರ. ಗುರುಮಹಾಂತ ಸ್ವಾಮಿಗಳು ಯೋಜನೆಗಳನ್ನು ರೂಪಿಸಿ-ಕೊಟ್ಟು ಎಲ್ಲ ರೀತಿಯ ಮಾರ್ಗದರ್ಶನ ಮಾಡಿದರು.

### ೪೪. ಭಕ್ತ-ಜಂಗಮ ಸಾಮರಸ್ಯ :

ಚಿತ್ತರಗಿ ಸಂಸ್ಥಾನಮಠ ಇಳಕಲ್ಲ ಇದು ಬಸವ ಪರಪಂರಪರೆಯ ಮಠವಾಗಿದ್ದು ಇಲ್ಲಿ ಸದಾಕಾಲವೂ ಭಕ್ತ-ಜಂಗಮ ಸಾಮರಸ್ಯವು ಹಾಲು-ಜೇನಿನಂತೆ ಮಧುರ

ವಾಗಿದೆ. ಆಗಾಗ ಒಂದೊಂದು ಸಲ ಯಾರ್‍ಯಾರದೋ ಮಾತ ಕೇಳಿ ಕೆಲವರು ಬಿರುಗಾಳಿಗೆಸಿಕ್ಕ ಗಿಡ-ಬಳ್ಳಿಗಳಂತೆ ಹೊಯ್ದಾಡುತ್ತಾರೆ. ಬಿರುಗಾಳಿ ದಾಟಿ ಹೋದ ನಂತರ ಮತ್ತೆ ಗಟ್ಟಿಯಾಗಿ, ದೃಢವಾಗಿ ನಿಲ್ಲುತ್ತಾರೆ. ಇದು ನಿಸರ್ಗದ ನಿಯಮವಾಗಿದೆ.

ಅಂತೆಯೇ **ಅಪ್ಪ ಬಸವಣ್ಣನವರು** ತಮ್ಮ ವಚನದ ಮೂಲಕ ಎಚ್ಚರಿಸಿ, ಸದಾಕಾಲ ಜಾಗೃತವಾಗಿರಿ ಎಂದು ಹೇಳಿದ್ದಾರೆ-

ಕಬ್ಬಿನ ಮೇಲೆ ಜೇನಿಟ್ಟಿತ್ತೆಂಬರು,
ಅವು ಒಂದರ ಸಿಹಿಯನೊಂದರಿಯವು.
ಭಕ್ತ ಜಂಗಮದ ನಡುವೆ
ಅರ್ಥ ಪ್ರಾಣ ಅಭಿಮಾನವೆಂಬ ಸಿಬಿಕೆ
ಕಾಡಿತ್ತು ಕಾಣಾ ಕೂಡಲಸಂಗಮದೇವಾ

ವಿಶ್ವಗುರು ಬಸವಣ್ಣನವರ ಈ ವಚನ ಅರ್ಥಮಾಡಿಕೊಂಡು ಬದುಕಿದರೆ ಯಾವ ಭಾವ ಭೇದವಾಗಲೀ ಭಿನ್ನತೆಗಳಾಗಲೀ ಉಂಟಾಗುವುದಿಲ್ಲ. ಈ ವಚನದಲ್ಲಿ ಒಂದು **ಸುಂದರ ದೃಷ್ಟಾಂತವನ್ನು** ಕೊಟ್ಟಿದ್ದಾರೆ. ಅಲ್ಲೊಂದು ಕಬ್ಬಿನ ತೋಟ, ಆ ತೋಟದಲ್ಲಿ ಬೆಳೆದುನಿಂತ ಕಬ್ಬಿಗೆ ಜೇನು ಹುಟ್ಟುಕಟ್ಟಿದೆ. ಮಧುರವಾದ ಜೇನನ್ನು ತಯಾರಿಸಿದೆ. ಕಬ್ಬಿನಲ್ಲಿಯೂ ಸಿಹಿ ಇದೆ. ಜೇನಿನಲ್ಲಿಯೂ ಸಿಹಿ ಇದೆ. ಕಬ್ಬಿಗೆ ಜೇನಿನ ಸಿಹಿಯ ಅನುಭವವಿಲ್ಲ. ಜೇನಿಗೆ ಕಬ್ಬಿನಗೊಳಗಣ ಸಿಹಿಯ ಅನುಭವ ಇಲ್ಲ. ಇವೆರಡರ ಮಧ್ಯದಲ್ಲಿ ಸಿಬಿಕೆ (ಸಿಬಿರು) ಅಡ್ಡವಾಗಿದೆ. ಅದೇ ಪ್ರಕಾರ ಭಕ್ತ ಮತ್ತು ಜಂಗಮ ತತ್ವಗಳು. ಭಕ್ತ ಕಬ್ಬಿನಂತೆ ಸ್ಥಿರವಾಗಿ ನಿಲ್ಲಬೇಕು. ಜಂಗಮ ಜೇನ್ನೊಣದಂತೆ ಚಲಿಸುತ್ತಿರಬೇಕು.ಭಕ್ತ ಕಬ್ಬಿನಂತೆ ಭೂಮಿಯ ಸಾರಸತ್ವ ಹೀರಿ ಕಬ್ಬಿನ ಸಿಹಿ ರಸವಾದರೆ, ಜಂಗಮ ಜೇನ್ನೊಣದಂತೆ ಸಂಚರಿಸಿ ವಿವಿಧ ಅನುಭವಗಳೆಂಬ ಪುಷ್ಪರಸ ತಂದು ಸ್ವಾನುಭಾವದ ಲಾಲಾರಸ ಬೆರೆಸಿ ಮಧುರವಾದ ಜೇನು ತಯಾರಿಸುವನು. ಇಬ್ಬರೂ ಸಿಹಿಯೇ. ಆದರೆ ಇಬ್ಬರ ನಡುವೆ ಅರ್ಥಪ್ರಾಣ ಅಭಿಮಾನವೆಂಬ ಅಹಂ ಸಿಬಿಕೆ ಕಾಡಿದರೆ ಇಬ್ಬರೂ ಭಿನ್ನರು. ಸಿಬಿಕೆ ತೆಗೆದರೆ ಇಬ್ಬರೂ ಸಿಹಿ. ಇಂತಹ ಸಾಮರಸ್ಯ ಭಕ್ತ-ಜಂಗಮದ್ದು.

ಪರಮಪೂಜ್ಯ ಶ್ರೀ ಮ.ನಿ.ಪ್ರ. ಗುರುಮಹಾಂತ ಸ್ವಾಮಿಗಳವರ ಪಟ್ಟಾಭಿ-ಷೇಕದ ಪೂರ್ವದಲ್ಲಿ ದಿನಾಂಕ ೩೦-೦೮-೨೦೦೪ ರಂದು ಇಳಕಲ್ಲದಲ್ಲಿ ಜರುಗಿದ ದುರ್ಘಟನೆಯಿಂದಾಗಿ ಚಿತ್ತರಗಿ ಮಠಕ್ಕೆ ಹೋಗದೆ ಪೂಜ್ಯರಾದ ಡಾ॥ ಮಹಾಂತ ಶಿವಯೋಗಿಗಳು ಹಾಗೂ ಶ್ರೀ ಗುರುಮಹಾಂತ ಸ್ವಾಮಿಗಳು ನಿರ್ಲಿಪ್ತರಾಗಿ ಇಳಕಲ್ಲ

ಶ್ರೀಮಠದಲ್ಲಿಯೇ ಉಳಿದರು. ಅದೊಂದು ವಿಷಗಳಿಗೆ! ಈ ವಿಷಗಳಿಗೆ ದೂರಾಗಲು ೧೨ ವರ್ಷ ಬೇಕಾಯಿತು !!

ಚಿತ್ತರಗಿ ಭಕ್ತರ ಹೃದಯ ಪೂಜ್ಯರಿಗಾಗಿ ಹಂಬಲಿಸುತ್ತಿತ್ತು. ಪೂಜ್ಯರೂ ಕೂಡ ಭಕ್ತರನ್ನು ಕಾಣಲು ಹಾತೊರೆಯುತ್ತಿದ್ದರು. ಅಂತೂ ಆ ಮಂಗಲಮಯ ದಿನ ಬಂದಿತು. ದಿನಾಂಕ ೨೦-೦೩-೨೦೧೬ ರವಿವಾರ ಚಿತ್ತರಗಿ ಪೀಠದ ಸಹಸ್ರಾರು ಭಕ್ತರು ಹಿರಿಯ ಹಾಗೂ ಕಿರಿಯ ಗುರುಗಳಿಬ್ಬರನ್ನೂ ಇಳಕಲ್ಲದಿಂದ ಚಿತ್ತರಗಿಗೆ ಬರಮಾಡಿಕೊಂಡರು. ಹೊಸಪೇಟೆ , ಹಾಳಕೆರೆ, ಜಮಖಂಡಿ, ಗುಳೇದಗುಡ್ಡ, ಶಿರೂರ, ರಬಕವಿ, ಸತ್ತಿ, ಸಿದ್ಧಯ್ಯನಕೋಟೆ, ಲಿಂಗಸಗೂರು ಮುಂತಾದ ಪೂಜ್ಯರು, ಹುನಗುಂದ ಶಾಸಕರಾದ ಶ್ರೀ ವಿಜಯಾನಂದ ಕಾಶಪ್ಪನವರ, ಬಾಗಲಕೋಟೆಯ ಶ್ರೀ ವೀರಣ್ಣ ಚರಂತಿಮಠ ಮಾಜಿ ಶಾಸಕರು, ಹುನಗುಂದದ ಶ್ರೀ ದೊಡ್ಡನಗೌಡ ಪಾಟೀಲ ಮಾಜಿ ಶಾಸಕರು, ಕುಷ್ಟಗಿಯ ಶ್ರೀ ಕೆ. ಶರಣಪ್ಪ ಮಾಜಿ ಶಾಸಕರು, ಡಾ. ಶಂಭು ಬಳಿಗಾರ ಜಾನಪದ ವಿದ್ವಾಂಸರು, ಶ್ರೀ ಡಾ. ಮಲ್ಲಣ್ಣ ನಾಗರಾಳ ಕೃಷಿ ತಜ್ಞರು, ಇಳಕಲ್ಲ ಅಕ್ಕನಬಳಗದ ತಾಯಂದಿರು, ಚಿತ್ತರಗಿ ಪೀಠದ ಎಲ್ಲಾ ಶಾಖಾಮಠಗಳ ಭಕ್ತರು ಆಗಮಿಸಿದ್ದರು. ಚಿತ್ತರಗಿ ಗ್ರಾಮದ ಮಹಾದ್ವಾರದಲ್ಲಿ ಉಭಯ ಶ್ರೀಗಳವರ ಪಾದಕ್ಕೆ ನೀರು ಹಾಕಿ, ಪಾದಪೂಜೆ ಗೈದು ಶ್ರೀಮಠಕ್ಕೆ ಕರೆದೊಯ್ದರು.

ಪೂಜ್ಯಶ್ರೀ ಗುರುಮಹಾಂತ ಸ್ವಾಮಿಗಳವರ ಸದುವಿನಯ, ಸದಾಚಾರ, ಸದ್ಭಾವನೆಯ ಸೇವೆಯು ಚಿತ್ತರಗಿ ಪೀಠದ ಭಕ್ತರ ಹೃದಯವನ್ನು ಗೆದ್ದಿತು. ಸೇವೆಯಿಂದ ಸ್ವಾಮಿತ್ವ ಎಂಬುದನ್ನು ಭಕ್ತರು ಅರಿತರು. ಗುರುವಿನಲ್ಲಿ ಕುಲವಿಲ್ಲ, ಜಂಗಮದಲ್ಲಿ ಜಾತಿ ಇಲ್ಲ ಎಂಬ ಬಸವತತ್ವದ ಧ್ವಜ ಎಲ್ಲೆಡೆಯಲ್ಲಿ ವಿಜೃಂಭಿಸಿತು. ಭಕ್ತ-ಜಂಗಮ ಸಾಮರಸ್ಯವನ್ನು, ಜ್ಯೋತಿ ಮುಟ್ಟಿ ಜ್ಯೋತಿಯಾಗುವ, ಗುರುಮುಟ್ಟಿ ಗುರುವಾಗುವ ಶರಣ ಸಿದ್ಧಾಂತವನ್ನು ಚಿತ್ತರಗಿ ಪೀಠವು ಜಗತ್ತಿಗೆ ಸಾರಿತು.

ಇಂತಹ ಬಸವತತ್ವದ ಅರಿವೇ ಗುರುವಾಗುವುದು, ಅರಿವಿನ ಆಚರಣೆಯೇ ಭಕ್ತವಾಗುವುದು, ಆಚರಣೆಯ ಅನುಭಾವವೇ ಜಂಗಮವಾಗುವುದು. ಅಂತೆಯೇ ಅನುಭಾವಿ ಶರಣರು ಹೇಳುತ್ತಾರೆ- ಪರಾತ್ಪರ ಪರಶಿವನು ತನ್ನ ಲೀಲಾವಿನೋದಕ್ಕೆ ತಾವೇ ಗುರುವಾದ, ತಾನೇಲಿಂಗಭಕ್ತನಾದ, ತಾನೇ ಜಂಗಮವಾದ. ಪರಿಶಿವನ ಮೂರು ಅವಿನಾಭಾವ, ಬಿಚ್ಚಿ ಬೇರಾಗದ ಅವಸ್ಥೆಗಳಿವು. ಈ ಸಾಮರಸ್ಯ ಅರಿತಾಗ ವ್ಯಷ್ಟಿ-ಸಮಷ್ಟಿ, ವ್ಯಕ್ತಿ-ಸಮಾಜ, ದೇಶ-ಜಗತ್ತಿನ ಉದ್ಧಾರ ಸಾಧ್ಯ.

ಪೂಜ್ಯ ಮಹಾಂತ ಶಿವಯೋಗಿಗಳ ಈ ಬಸವಾಚಾರವನ್ನರಿತು ಇಳಕಲ್ಲ

ಶ್ರೀಮಠದ ಸಂಪರ್ಕಹೊಂದಿ, ಪೂಜ್ಯರ ಬಸವತತ್ವ ಮಹಾಮಣಿಹದಲ್ಲಿ ಸೇವೆಸಲ್ಲಿಸಿ ಲಿಂಗೈಕ್ಯರಾದ ಹಿರಿಯರು, ಈಗ ಸೇವೆ ಸಲ್ಲಿಸುತ್ತಿರುವ ಹಿರಿಯರು, ತಾಯಂದಿರು, ಯುವಜನಾಂಗ ಎಲ್ಲರೂಸ್ಮರಣಾರ್ಹರು, ಅಭಿನಂದನೆಗೆ ಪಾತ್ರರು. ಅವರಲ್ಲಿ ಪ್ರಮುಖವಾದ ಕೆಲವರು ಹೀಗಿದ್ದಾರೆ-

**ಲಿಂಗಕ್ಯರಾಗಿರುವ ಶರಣರಾದ**

ಶ್ರೀ ಎಸ್. ಆರ್. ಕಂಠಿ, ಶ್ರೀ ಚಿನ್ನಪ್ಪ ಮೈದರಗಿ, ಶ್ರೀ ವೀರನಗೌಡ ಪಾಟೀಲ, ಶ್ರೀ ಸಿದ್ರಾಮಯ್ಯ ಕಲ್ಮಠ, ಶ್ರೀ ದೊಡ್ಡಪ್ಪ ಶಿವಬಲ್ಲ, ಶ್ರೀ ಚೆನ್ನಬಸಪ್ಪ ಮೈದರಗಿ, ಶ್ರೀ ಕಳಕಪ್ಪ ಸಮಾಳದ, ಶ್ರೀ ಮಹಾಂತಪ್ಪ ಗದ್ದಿ, ಶ್ರೀ ಚೆನ್ನಬಸಪ್ಪ ಹರಿಹರ, ಶ್ರೀ ದೊಡ್ಡಪ್ಪ ಹರಿಹರ, ಶ್ರೀ ಎಂ. ಎಂ. ಜಾಪಗಾಲ, ಶ್ರೀ ಶಿವಪ್ಪ ಕೊಡಗಲಿ, ಶ್ರೀ ವೀರಪ್ಪ ಅಕ್ಕಿ, ಶ್ರೀ ಗವಿಸಿದ್ದಪ್ಪ ಪಟ್ಟಣಶೆಟ್ಟಿ, ಶ್ರೀ ಎಸ್. ಬಿ. ಬಂಡರಗಲ್, ಶ್ರೀ ಓಂಕಾರಪ್ಪ ಅರಳಿಕಟ್ಟಿ, ಶ್ರೀ ರಾಮಣ್ಣ ಬೇವಿನಕಟ್ಟಿ, ಶ್ರೀ ಮಹಾಂತಯ್ಯ ಹಿರೇಮಠ, ಶ್ರೀ ಎ. ಎ. ಬಿಜ್ಜಳ, ಶ್ರೀ ಆದಪ್ಪ ಬಿಜ್ಜಳ, ಶ್ರೀ ಮಹಾಂತಪ್ಪ ಮಲಗಿಹಾಳ, ಶ್ರೀ ಹಣಮಂತಪ್ಪ ಸಪ್ಪರದ, ಶ್ರೀ ರಾಮಚಂದ್ರಪ್ಪ ಕರ್ಜಗಿ, ಶ್ರೀ ಶರಣಪ್ಪ ಕುಂಬಾರ, ಶ್ರೀ ಬಾಬಣ್ಣ ಸಮಾಳದ, ಶ್ರೀ ಚೋಳಪ್ಪ ಸೂಡಿ, ಪ್ರೊ. ಬಿ. ಎಂ. ತೆಳಗಡೆ, ಶ್ರೀ ಎಚ್. ಕೆ. ನಾಗನೂರ ಮುಂತಾದವರ ಸೇವೆಯು ಸ್ಮರಣಾರ್ಹವಾಗಿದೆ.

**ಈಗಿರುವ ಸದ್ಭಕ್ತರಾದ**

ಶ್ರೀ ಸಿ. ಸಿ. ಗಣಾಚಾರಿ, ನಿ. ಶಿಕ್ಷಕರು, ಶ್ರೀ ಗೆದಣ್ಣ ಶಿವಬಲ್ಲ, ಶ್ರೀ ಸಿದ್ದಪ್ಪ ಅಂಗಡಿ, ಶ್ರೀ ಜಿ. ಪಿ. ಪಾಟೀಲ, ಶ್ರೀ ಜಿ. ವ್ಹಿ. ಕಿರಗಿ, ಶ್ರೀ ರಾಮಣ್ಣ ಕಂಪ್ಲಿ, ಶ್ರೀ ಈರಪ್ಪ ಗೋನಾಳ, ಶ್ರೀ ಗುರಣ್ಣ ಮರಟದ, ಶ್ರೀ ನಾಗಪ್ಪ ಕನ್ನೂರ, ಶ್ರೀ ಎಂ. ಎಸ್. ಪಾಟೀಲ, ಶ್ರೀ ಮಂಜುನಾಥ ಹರಿಹರ, ಶ್ರೀ ರಾಮಣ್ಣ ಕಂಪಲಿ, ಶ್ರೀ ಗುರುನಾಥಪ್ಪ ನಾಗಲೋಟಿ, ಡಾ. ಕೊಟ್ರಪ್ಪ ಅಕ್ಕಿ, ಶ್ರೀ ಮಹಾಂತಪ್ಪ ಶೆಟ್ರು, ಶ್ರೀ ತಾತಯ್ಯ ಪತ್ರಿಮಠ, ಶ್ರೀ ಈರಣ್ಣ ಮಾನ್ವಿ, ಶ್ರೀ ಹರ್ತಿ ಸಿದ್ದಪ್ಪ, ಶ್ರೀ ಮಹಾಂತಪ್ಪ ವಾಲಿ, ಶ್ರೀ ವೆಂಕಟೇಶ ಸಾಕಾ, ಶ್ರೀ ಶರಣಪ್ಪ ಅಕ್ಕಿ, ಶ್ರೀ ಮಲ್ಲಿಕಾರ್ಜುನ ಅಕ್ಕಿ, ಶ್ರೀ ಶೇಖರಪ್ಪ ಹುಲಗಿರಿ, ಶ್ರೀ ರಾಮಚಂದ್ರಪ್ಪ ಚವ್ಹಾಣ, ಶ್ರೀ ಶಿವರುದ್ರಪ್ಪ ಗೊಂಗಡಶೆಟ್ಟಿ, ಶ್ರೀ ರೇಣುಕಯ್ಯ ಶಾಸ್ತ್ರಿಮಠ, ಶ್ರೀ ಸೋಮಶೇಖರಯ್ಯ ಶಾಸ್ತ್ರಿಮಠ, ಶ್ರೀ ಹೆಚ್. ಬಿ. ಮಾಳಿ, ಶ್ರೀ ಮಹೇಶಪ್ಪ ಸಜ್ಜನ, ಶ್ರೀ ಶಂಕರಗೌಡ ಕೋಟಿ, ಶ್ರೀ ಸಂಗಣ್ಣ ಹುಂಡೇಕಾರ, ಶ್ರೀ ವಿರುಪಾಕ್ಷಪ್ಪ ಕೊಡಗಲಿ, ಶ್ರೀ ಎಂ. ವ್ಹಿ. ಪಾಟೀಲ, ಶ್ರೀ ಗೆದಣ್ಣ ಶಿವಬಲ್ಲ, ಶ್ರೀ

ಸಂಗಣ್ಣ ಗದ್ದಿ, ಶ್ರೀ ಶಿವಾನಂದ ಓದಾ, ಶ್ರೀ ಮೋಹನ ಅಕ್ಕಿ, ಶ್ರೀ ಶಿವಾನಂದ ರುಳಿ, ಶ್ರೀ ದಿಲೀಪ ದೇವಗಿರಕರ, ಶ್ರೀ ಚಂದ್ರಶೇಖರ ಜಾಪಗಾಲ, ಶ್ರೀ ಮೋಹನ ಹೊಸಮನಿ, ಶ್ರೀ ಬಸವರಾಜ ಕಬ್ಬಿಣದ, ಶ್ರೀ ಸಿ. ಸಿ. ಚಂದ್ರಪಟ್ಟಣ, ಶ್ರೀ ಅಶೋಕ ಬಿಜ್ಜಲ, ಶ್ರೀ ಅರುಣ ಬಿಜ್ಜಲ, ಶ್ರೀ ತಿಮ್ಮಣ್ಣಾ ಭೋಗಾಪುರ, ಶ್ರೀ ರುದ್ರಪ್ಪ ಸಮತರ, ಡಾ॥ ಮಹಾಂತೇಶ ಕಡಪಟ್ಟಿ ಇಳಕಲ್ಲ, ಶ್ರೀ ಸಿದ್ದಪ್ಪ ಶೆಟ್ಟರ, ಶ್ರೀ ಮಹಾಂತಪ್ಪ ಶೆಟ್ಟರ, ಡಾ॥ ಸಜ್ಜನ ಇಳಕಲ್ಲ, ಡಾ॥ ಗುರುನಾಥ ರಾಜೊಳ್ಳಿ, ಡಾ. ಶಂಭು ಬಳಿಗಾರ, ಪ್ರೊ. ವಿ. ವಿ. ಅಲೆಗಾವಿ ಪ್ರೊ. ಎಸ್. ಕೆ. ಕುಲಕರ್ಣಿ, ಶ್ರೀ ಶಾಂತಣ್ಣ ಸರಗಣಾಚಾರಿ, ಶ್ರೀ ವೀರಯ್ಯ ಹಿರೇಮಠ, ಶ್ರೀ ಮಲ್ಲಯ್ಯ ಗಣಾಚಾರಿ, ಶ್ರೀ ಗುರಪ್ಪ ಸೂಡಿ, ಶ್ರೀ ಚಂದಪ್ಪ ಸೂಡಿ, ಶ್ರೀ ಜಂಬಣ್ಣ ಮುದಗಲ್ಲ, ಶ್ರೀ ಚೂಡಪ್ಪ ಬಾವಿ, ಶ್ರೀ ಹೊನ್ನಪ್ಪ ಕೆಂಧೂಳಿ, ಶ್ರೀ ಫಣಿರಾಜ ಗುಳೇದ, ಶ್ರೀ ಗುರಸಂಗಪ್ಪ ಕೋಟಿ, ಶ್ರೀ ಪುರುಷೋತ್ತಮ ಡಾಗಾ, ಶ್ರೀ ಬಸವರಾಜ ಹಡಪದ, ಶ್ರೀ ಮಹಾಂತೇಶ ಯಲ್ಲಟ್ಟಿ, ಶ್ರೀ ಮನೋಹರ ಮೈದರಗಿ, ಶ್ರೀ ಪ್ರಭು ಮೈದರಗಿ, ಶ್ರೀ ಸಂಗಣ್ಣ ಗದ್ದಿ, ಶ್ರೀ ವಿಜಯಾನಂದ ಕಾಶಪ್ಪನವರ ಶಾಸಕರು, ಶ್ರೀ ದೇವಾನಂದ ಕಾಶಪ್ಪನವರ, ಶ್ರೀ ವಿಶ್ವನಾಥ ಪಾಟೀಲ, ಶ್ರೀ ಶಂಕರಗೌಡ ಕೋಟಿ, ಶ್ರೀ ಮಹಾಂತಗೌಡ ಪಾಟೀಲ, ಶ್ರೀ ಅಶೋಕ ಸುಂಕಾಪೂರ, ಶ್ರೀ ಶಂಕರಣ್ಣ ತೋಟದ, ಶ್ರೀ ವಿಕ್ರಾಂತ ಶಾವಿ, ಶ್ರೀ ನಾಗರಾಜ, ಶ್ರೀ ಮಹಾಂತೇಶ ಗೊಂಗಡಶೆಟ್ಟಿ, ಶ್ರೀ ದರ್ಶನ ಮರಟದ, ಶ್ರೀ ಶಿವರಾಜ ಅಕ್ಕಿ, ಶ್ರೀ ಅವಿನಾಶ ಅಕ್ಕಿ, ಶ್ರೀ ಅಭಿಷೇಕ ವಾಲಿ, ಶ್ರೀ ರವಿ ಅಂಗಡಿ, ಶ್ರೀ ಅವಿನಾಶ ಗೊಂಗಡಶೆಟ್ಟಿ, ಬಸವರಾಜ ಚಳಗೇರಿ,ಶ್ರೀ ಸಂಗಣ್ಣ ಕಂಠಿ, ಶ್ರೀ ಚಂದ್ರಶೇಖರ ಶ್ರೀ ಉಮೇಶ ಸರಗಣಾಚಾರಿ, ಶ್ರೀ ವಿಜಯ ಸೂಡಿ, ಶ್ರೀ ಕುಮಾರ ಕಬ್ಬಿಣದ, ಶ್ರೀ ರಾಜು ದೊಡ್ಡನಗೌಡರ ಮುಂತಾದ ಶರಣರು.

**ಅಕ್ಕನಬಳಗದ ತಾಯಂದಿರಾದ**

ಶ್ರೀಮತಿ ಡಾ. ಅರುಣಾ ಅಕ್ಕಿ, ಶ್ರೀಮತಿ ಹಂಪಕ್ಕ ಮರಟದ, ಶರಣೆ ಲಿಂಗದೇವಿ, ಶ್ರೀಮತಿ ಗಂಗಮ್ಮ ಹೊಸಮನಿ, ಶ್ರೀಮತಿ ಶಿವಗಂಗಮ್ಮ ಕಲ್ಮಠ, ಶ್ರೀಮತಿ ಶಕುಂತಲಾ ಚೋಬಾರಿ, ಶ್ರೀಮತಿ ಲಕ್ಷ್ಮಿದೇವಿ ಶಿವಬಲ್ಲ, ಶ್ರೀಮತಿ ಗಿರಿಜಾದೇವಿ ಶಿವಬಲ್ಲ, ಶ್ರೀಮತಿ ಅಕ್ಕಮಹಾದೇವಿ ಪಟ್ಟಣಶೆಟ್ಟಿ, ಶ್ರೀಮತಿ ಅನುಪಮಾ ಗೊಂಗಡಶೆಟ್ಟಿ, ಶ್ರೀಮತಿ ಪ್ರೇಮಾ ವಸ್ತ್ರದ, ಶ್ರೀಮತಿ ಲಲಿತಾ ಅಂಗಡಿ, ಶ್ರೀಮತಿ ಸವಿತಾ ಗೊಂಗಡಶೆಟ್ಟಿ, ಶ್ರೀಮತಿ ಸುವರ್ಣಾ ಗೊಂಗಡಶೆಟ್ಟಿ, ಶ್ರೀಮತಿ ವಿಜಯಾ ಗೋನಾಳ, ಶ್ರೀಮತಿ ಸುನೀತಾ ಅಂಗಡಿ, ಶ್ರೀಮತಿ ದಾನಮ್ಮ ಅಂಗಡಿ, ಶ್ರೀಮತಿ ದೇವಿಕಮ್ಮ ಕುಕನೂರ, ಶ್ರೀಮತಿ ಪ್ರತಿಭಾ ಸಜ್ಜನ, ಶ್ರೀಮತಿ

ವಿಜಯಲಕ್ಷ್ಮಿ ಹುಂಡೇಕಾರ, ಶ್ರೀಮತಿ ವಿಜಯಲಕ್ಷ್ಮಿ ಹರಿಹರ, ಶ್ರೀಮತಿ ಸುಮಂಗಲಾ ಅಕ್ಕಿ, ಶ್ರೀಮತಿ ಪಾರ್ವತೆವ್ವ ಚಟ್ಟೆರ, ಶ್ರೀಮತಿ ಕಮಲಮ್ಮ ಪಾಟೀಲ, ಶ್ರೀಮತಿ ವಿಶಾಲಾಕ್ಷಿ ಶೆಟ್ಟರ, ಶ್ರೀಮತಿ ವೀರಮ್ಮ ಕುಂಬಾರ, ಶ್ರೀಮತಿ ಸವಿತಾ ಮಾಟೂರ, ಶ್ರೀಮತಿ ಸುವರ್ಣ ಕಂಪ್ಲಿ, ಶ್ರೀಮತಿ ಪದ್ಮಾವತಿ ತಳಗೇರಿ, ಶ್ರೀಮತಿ ಶಾರದಾ ಚೂಡಿ, ಶ್ರೀಮತಿ ವಿದ್ಯಾ ಹಡಗಲಿ, ಶ್ರೀಮತಿ ಶಕುಂತಲಾ ಚೆನ್ನಿ, ಶ್ರೀಮತಿ ಜಯಶ್ರೀ ಕರ್ಜಗಿ, ಶ್ರೀಮತಿ ಅನಸೂಯಾ ಅಂಗಡಿ, ಶ್ರೀಮತಿ ಗೀತಾ ಅಕ್ಕಿ, ಶ್ರೀಮತಿ ಮಹಾಂತಮ್ಮ ಸೂಡಿ ಮುಂತಾದ ಶರಣೆಯರು.

**ಶ್ರೀಮಠದಲ್ಲಿ ಸೇವೆ ಸಲ್ಲಿಸಿದವರು ಹಾಗೂ ಸಲ್ಲಿಸುತ್ತಿರುವವರು**

ಶ್ರೀ ಹುನ್ನೂರ, ಶ್ರೀ ಕಲ್ಮಠ, ಶ್ರೀ ಶರಣಬಸವ ಬಸಾಪುರ, ಶ್ರೀ ಮಲ್ಲೇಶಿ, ಶ್ರೀ ಸಂಗಣ್ಣ, ಶ್ರೀ ಶಿವರಾಜ ಧರೆಗೌಡರ, ವಾಹನ ಚಾಲಕ ಸಂಗಮೇಶ ಅವಟಿ, ಶ್ರೀ ಶಿವಪುತ್ರಪ್ಪ ತಾಳಿಕೋಟಿ, ಶ್ರೀಮತಿ ಯಲ್ಲಮ್ಮ ಕುಂಬಾರ, ಶ್ರೀ ಬಸವರಾಜ, ಶ್ರೀ ಅಶೋಕ ಬೇವಿನಮಟ್ಟಿ, ಲಿಂ. ಶ್ರೀ ಚಿಲ್ಲಿಂಗಯ್ಯ ವಸ್ತ್ರದ ಮುಂತಾದವರ ಸೇವೆ ಸ್ಮರಣೀಯವಾಗಿದೆ.

**ಇದೇ ಪ್ರಕಾರ ಹಿರೇಬಾದವಾಡಗಿಯ :** ಲಿಂ. ಶ್ರೀ ವಿ. ಸಿ. ಅಂಗಡಿ, ಲಿಂ. ಶ್ರೀ ಶಂಕರೆಪ್ಪ ಹಳ್ಳೂರ, ಲಿಂ. ಶ್ರೀ ಹಾದಿಮನಿ ಶರಣರು, ಶ್ರೀ ಚೆನ್ನವೀರ ಶಾಸ್ತ್ರಿಗಳು ಮುಂತಾದವರು.

**ಹುನಗುಂದದ :** ಲಿಂ. ಶ್ರೀ ಸಿದ್ದಪ್ಪ ಕಡಪಟ್ಟಿ, ಲಿಂ. ಶ್ರೀ ಗುರುಬಸವಾರ್ಯಮಠ, ಲಿಂ. ಶ್ರೀ ಶಂಕರಣ್ಣ ನಾಗರಾಳ, ಲಿಂ. ಶ್ರೀ ಶಿವಸಂಗಪ್ಪ ಕಡಪಟ್ಟಿ, ಲಿಂ. ಶ್ರೀ ಬಸವರಾಜ ತೆಗ್ಗಿನಮಠ, ಲಿಂ. ಶ್ರೀ ಬಿ. ಎಸ್. ಚಟ್ನಿಹಾಳ, ಶ್ರೀ ಬಸವರಾಜ ಕಡಪಟ್ಟಿ, ಶ್ರೀ ಶಿವಾನಗಪ್ಪ ದರಗದ, ಶರಣೆ ದೊಡ್ಡಮ್ಮ ಹವಾಲ್ದಾರ, ಶ್ರೀ ಶಿವಣ್ಣ ನಾಗೂರ, ಶ್ರೀ ಮಲ್ಲಣ್ಣ ನಾಗರಾಳ ಮುಂತಾದವರು.

**ಲಿಂಗಸೂರ-ಭಾವಣೆಯ :** ಲಿಂ. ಶ್ರೀ ಕಾಡಪ್ಪ ಹೆಸರೂರ, ಲಿಂ. ಶ್ರೀ ಮಹಾಂತಪ್ಪ ಇಟ್ಲಾಪುರ, ಶ್ರೀ ವೀರಬಸಪ್ಪ ಹುರಕಡ್ಲಿ, ಶ್ರೀ ಮಲ್ಲಣ್ಣ ನರಕಲದಿನ್ನಿ, ಶ್ರೀ ಅಮರೇಗೌಡ ಭಯ್ಯಾಪೂರ, ಶ್ರೀ ಕೆ. ಸಂಗನಗೌಡ ಪಾಟೀಲರು, ಶ್ರೀ ಶರಣಪ್ಪ ಐದನಾಳ, ಶ್ರೀ ಜಂಗಮ ಮೂರ್ತಿ, ಶ್ರೀ ಶರಣಪ್ಪ ಸಕ್ರಿ, ಶ್ರೀ ಅಂಬಣ್ಣ ಸಕ್ರಿ, ಶ್ರೀ ಈಶಣ್ಣ ಸಾಲಮನಿ, ಶ್ರೀ ದೊಡ್ಡಪ್ಪ ಹೆಸರೂರ, ಡಾ. ನಡವಿನಮನಿ ಮುಂತಾದವರು.

**ಕರಡಕಲ್ಲ ಗ್ರಾಮದ :** ಶ್ರೀ ವೀರಭದ್ರಗೌಡರು, ಶ್ರೀ ಎನ್. ಶರಣಪ್ಪನವರು, ಶ್ರೀ

ಭೂಪನಗೌಡರು, ಶ್ರೀ ಸಿದ್ಧನಗೌಡರು, ಶ್ರೀ ಗಿರಿಮಲ್ಲಗೌಡರು ಮುಂತಾದವರು.

**ಚಿತ್ತರಗಿ** : ಗ್ರಾಮದ ಸಮಸ್ತ ಭಕ್ತರು.

**ಅಮರಾವತಿಯ** : ಶ್ರೀಮಂತ ರಾಮಪ್ಪ ದೇಸಾಯಿಯವರು ಹಾಗೂ ಚಿತ್ತರಗಿ ಪೀಠದ ಈ ಎಲ್ಲ ಸದ್ಭಕ್ತರಲ್ಲದೆ, ಎಲೆಯ ಮರೆಯ ಕಾಯಿಯಂತೆ, ಗುಪ್ತ ಭಕ್ತರಾಗಿ ಸೇವೆ ಸಲ್ಲಿಸುತ್ತಿರುವ ಅನಂತ ಭಕ್ತರಿಗೆ ಶರಣುಗಳು.

**೪೫. ಸವದಿ ಮಠಕ್ಕೆ ೬ನೇ ಪೀಠಾಧಿಪತಿಯಾಗಿದ್ದು :**

ಪರಮಪೂಜ್ಯ ಮಹಾಂತ ಶಿವಯೋಗಿಗಳು ತಮಗೆ ೭೪ ವರ್ಷ ತುಂಬಿದ ಬಳಿಕ, ಚಿತ್ತರಗಿಸಂಸ್ಥಾನ ಮಠ ಇಳಕಲ್ಲಕ್ಕೆ ೨೦ನೇ ಪೀಠಾಧಿಪತಿಯನ್ನಾಗಿ ಬಸವಭಕ್ತಿ ಸಂಪನ್ನರೂ, ಸದುವಿನಯದ ಭಂಡಾರಿಗಳೂ, ಸುಶಿಕ್ಷಿತ ವಿದ್ಯಾವಂತರೂ ಆಗಿರುವ, ನರಗುಂದದ ಹೆಗಡಾಳ ಶರಣ ಮನೆತನದ ಶ್ರೀ ಸಿದ್ಧರಾಮಸ್ವಾಮಿಗಳನ್ನು ಆಯ್ಕೆ ಮಾಡಿಕೊಂಡು, ನಾಡಿನ ನೂರಾರು ಜನ ಜಗದ್ಗುರುಗಳು, ಗುರು-ವಿರಕ್ತ ಸ್ವಾಮಿಗಳ ಸಾನಿಧ್ಯದಲ್ಲಿ ಲಕ್ಷಾಂತರ ಭಕ್ತ ಸಮ್ಮುಖದಲ್ಲಿ ದಿನಾಂಕ ೧೨-೦೯-೨೦೦೪ ರಂದು ಶಿವಮೊಗ್ಗ ಜಿಲ್ಲೆಯ ಚೆನ್ನಗಿರಿ ತಾಲೂಕಿನ ಪಾಂಡೋಮಟ್ಟಿ ವಿರಕ್ತಮಠದ ವಯೋವೃದ್ಧ, ಅನುಭವಾವಿ ಪೂಜ್ಯರಾದ ಶ್ರೀ ಮ.ನಿ.ಪ್ರ. ಚೆನ್ನಬಸವ ಸ್ವಾಮಿಗಳವರ ಲಿಂಗಹಸ್ತದಿಂದ 'ಜಂಗಮಸ್ಥಲ' ಪ್ರದಾನದೊಂದಿಗೆ **ಶ್ರೀ ಮ.ನಿ.ಪ್ರ. ಗುರುಮಹಾಂತ ಸ್ವಾಮಿಗಳೆಂದು** ನಾಮಕರಣ ಮಾಡಿ ಚಿತ್ತರಗಿ ಪೀಠದ ೨೦ನೇ ಅಧಿಪತಿಗಳನ್ನಾಗಿ ಪಟ್ಟಾಧಿಕಾರ ಮಾಡಿದರು. (ಸಂಪೂರ್ಣ ವಿವರನ್ನು ಈ ಗ್ರಂಥದ ಭಾಗ-೨ ರಲ್ಲಿ ಚಿತ್ತರಗಿ ಪೀಠ ಪರಂಪರೆಯಲ್ಲಿ ವಿವರಿಸಲಾಗಿದೆ)

**ಇದೇ ಪೂಜ್ಯ ಶ್ರೀ ಮ.ನಿ.ಪ್ರ ಗುರುಮಹಾಂತ ಸ್ವಾಮಿಗಳವನರನ್ನು ಸವದಿಯ ಸಮಸ್ತ ಸದ್ಭಕ್ತರ ಅಪೇಕ್ಷೆಯಂತೆ** ದಿನಾಂಕ ೨೦-೧೨-೨೦೦೪ ರಿಂದ ೧೯-೦೧-೨೦೦೫ ವರೆಗೆ ನಡೆದ ಸದಿಯ ಲಿಂ. ಪೂಜ್ಯ ಶ್ರೀ ಸಂಗನಬಸವ ಸ್ವಾಮಿಗಳವರ ೬೩ನೇ ಸ್ಮರಣೋತ್ಸವ-ಶರಣಸಂಸ್ಕೃತಿ ಮಹೋತ್ಸವ ಸಮಾರಂಭದಲ್ಲಿ ಸವದಿಯ ಸಂಗನ-ಬಸವ ಮಠ (ವಿರಕ್ತಮಠ) ಕ್ಕೆ ೬ನೇ ಮಠಾಧಿಪತಿಯನ್ನಾಗಿ ವಿಜೃಂಭಣೆಯಿಂದ ೧೯-೦೧-೨೦೦೫ ರಂದು ಜಂಗಮೋತ್ಸವ ಸಮಾರಂಭ ಜರುಗಿಸುವ ಮೂಲಕ ಪಟ್ಟಾಭಿಷೇಕ ನೆರವರಿಸಿದರು. ಪೂಜ್ಯರಾದ ಗದಗ, ಚಿತ್ರದುರ್ಗ, ನಿಡಸೋಸಿ ಜಗದ್ಗುರುಗಳವರ ದಿವ್ಯ ಸಾನಿಧ್ಯದಲ್ಲಿ ಪೂಜ್ಯರಾದ ಬೆಳಗಾವಿ-ನಾಗನೂರ ಶ್ರೀಗಳ ಅಧ್ಯಕ್ಷತೆಯಲ್ಲಿ ಧಾರವಾಡ ಮನಗುಂಡಿಯ ಗುರುಬಸವ ಮಹಾಮನೆಯ ಪೂಜ್ಯ ಶ್ರೀ

ಬಸವಾನಂದ ಸ್ವಾಮಿಗಳನವರ 'ಬಸವಧರ್ಮ' ಪ್ರವಚನ ಜರುಗಿತು.

ಈ ಜಂಗಮೋತ್ಸವ ಸಮಾರಂಭದಲ್ಲಿ ವಿಜಯಪುರ ಜ್ಞಾನಯೋಗಾಶ್ರಮದ ಪೂಜ್ಯ ಶ್ರೀ ಸಿದ್ಧೇಶ್ವರ ಮಹಾಸ್ವಾಮಿಗಳು, ಅಥಣಿ, ಸಿದ್ಧಯ್ಯನಕೋಟೆ, ಶಿರೂರ, ಘೋಡಗೇರಿ, ಮರೆಗುದ್ದಿ-ರಬಕವಿ, ಜಮಖಂಡಿ, ಲಿಂಗಸಗೂರ, ಬಾಗಲಕೋಟೆ, ಬೆಂಗಳೂರು, ಗುರುಮಿಠಕಲ್ಲ, ಹೊಸದುರ್ಗ, ನಿಪ್ಪಾಣಿ, ರಾಣೆಬೆನ್ನೂರ, ಚಿತ್ರದುರ್ಗ ಮುಂತಾದ ಮಠಗಳ ಪೂಜ್ಯರು ದಯಮಾಡಿಸಿ ಅನುಭಾವ ನೀಡಿದರು.

ಶರಣಸಾಹಿತಿಗಳಾದ ಪ್ರೊ. ಸಿದ್ಧಣ್ಣ ಲಂಗೋಟಿ ಗೌ॥ ಸಂಪಾದಕರು ಬಸವ ಬೆಳಗು ಪತ್ರಿಕೆ ಇಳಕಲ್ಲ ಅವರು ಅಧ್ಯಕ್ಷತೆ ವಹಿಸಿದ್ದರು. ಶರಣರಾದ ಶ್ರೀ ಕುಮಾರಣ್ಣ ಹುಗ್ಗಿಶೆಟ್ಟರ ಹುಬ್ಬಳ್ಳಿ, ಶ್ರೀ ನಾಗರಾಜ ನಾಡಗೌಡರ ಹುನಗುಂದ, ಶ್ರೀ ಅಶೋಕ ಬರಗುಂಡಿ ಗುಳೇದಗುಡ್ಡ, ಶ್ರೀ ರವಿ ಯಡಹಳ್ಳಿ ನ್ಯಾಯವಾದಿಗಳು ಜಮಖಂಡಿ, ಅತಿಥಿಗಳಾಗಿ ಆಗಮಿಸಿ ಅನುಭಾವ ನೀಡಿದರು. ಸಹಸ್ರಾರು ಜನ ಸವದಿ ಹಾಗೂ ನೆರೆ ಗ್ರಾಮಗಳ ಭಕ್ತರು ಹಿರಿಯ ಹಾಗೂ ಕಿರಿಯ ಉಭಯ ಪೂಜ್ಯರ ದರ್ಶನ ಆಶೀರ್ವಾದ ಪಡೆದರು. ಈ ಪಟ್ಟಾಧೀಕಾರ ಮೂಲಕ ಪೂಜ್ಯರು ಭಕ್ತ-ಜಂಗಮ ಭೇದ ವನ್ನು ಅಳಿಸಿಹಾಕಿ ಜ್ಯೋತಿ ಮುಟ್ಟಿ ಜ್ಯೋತಿಯಾಗುವ, ಗುರು ಮುಟ್ಟಿ ಗುರುವಾಗುವ ಶರಣ ಸಿದ್ಧಾಂತವನ್ನು ಅನುಷ್ಠಾನಕ್ಕೆ ತಂದು ಜಂಗಮಕ್ಕೆ ಜಾತಿ-ಬಂಧುಗಳಿಲ್ಲ, ಜಂಗಮ ವೆಂಬುದು ಜಾತಿಯಲ್ಲ, ಜಾತಿಯ ಕತ್ತಲೆ ಹೊಡೆದೋಡಿಸುವ ಜ್ಯೋತಿಯೇ ಜಂಗಮ ಎಂಬುದನ್ನು ಸಾಧಿಸಿ ತೋರಿದ ಮಹಾಮಹಿಮರಾಗಿದ್ದಾರೆ.

ಪೂಜ್ಯಶ್ರೀ ಗುರುಮಹಾಂತ ಸ್ವಾಮಿಗಳು ಚಿತ್ತರಗಿ ಸಂಸ್ಥಾನಮಠ ಇಳಕಲ್ಲ ಹಾಗೂ ಸವದಿಯ ಶ್ರೀ ಸಂಗನಬಸವ ವಿರಕ್ತಮಠ ಎರಡೂ ಮಠಗಳ ಅಧಿಪತಿಗಳಾಗಿ ಹಿರಿಯ ಪೂಜ್ಯರಾದ ಶ್ರೀ ಮ.ನಿ.ಪ್ರ ಮಹಾಂತ ಶಿವಯೋಗಿಗಳವರ ಮಾರ್ಗ-ದರ್ಶನದಲ್ಲಿ ಬಸವಸೇವಾ ದೀಕ್ಷೆಯ ಮೂಲಕ ಜಂಗಮಪುಂಗವರಾಗಿ ಭಕ್ತರ ಕಲ್ಯಾಣ-ಬಸವತತ್ವ ಪ್ರಸಾರದ ಮಹಾಮಣಿಹಕ್ಕಾಗಿ ಕಿಂಕರಭಾವದಿಂದ ಸೇವೆಗೈಯುತ್ತಿದ್ದಾರೆ. ಯೋಗ್ಯ ಗುರುವಿಗೆ ಯೋಗ್ಯ ಉತ್ತರಾಧಿಕಾರಿ ಸ್ವಾಮಿಗಳು ಸಿಕ್ಕಿದ್ದು ಈ ಎರಡೂ ಮಠಗಳ ಭಕ್ತರ ಪುಣ್ಯವಿಶೇಷವೆಂದೇ ಹೇಳಬೇಕು.

**೪೬. ಸವದಿ ಸಂಗನಬಸವ ಮಠದಲ್ಲಿ ಸೇವೆ-ಸಾಧನೆ :**

ಪರಮಪೂಜ್ಯ ಶ್ರೀ ಮ.ನಿ.ಪ್ರ. ಗುರುಮಹಾಂತ ಸ್ವಾಮಿಗಳವರು ಸವದಿಯ ಶ್ರೀ ಸಂಗನಬಸವ ಮಠಕ್ಕೆ ಸ್ವಾಮಿಗಳಾದ ನಂತರ, ಹಿರಿಯ ಪೂಜ್ಯ ಗುರುಗಳ

ಮಾರ್ಗದರ್ಶನದಲ್ಲಿ ಅದ್ಭುತವಾಗಿಕ್ರಿಯಾಯೋಜನೆಗಳನ್ನು ಜಾರಿಗೆ ತರುತ್ತಿದ್ದಾರೆ. ಪೂಜ್ಯರು ಪ್ರಾರಂಭಿಸಿದ ಯೋಜನೆಗಳನ್ನು ಮುಂದುವರೆಸಿರುವುದಲ್ಲದೆ, ತಾವೂ ಹೊಸ ಹೊಸ ಕಾರ್ಯಕ್ರಮಗಳನ್ನು ಹಾಕಿಕೊಂಡು ದುಡಿಯುತ್ತಿದ್ದಾರೆ.

ಪ್ರತಿ ವರುಷ ಡಿಸೆಂಬರ / ಜನೇವರಿ ಫೆಬ್ರುವರಿ ತಿಂಗಳಲ್ಲಿ ಒಂದು ತಿಂಗಳ ಬಸವ ಧರ್ಮ ಪ್ರವಚನ, ಕೊನೆಯಲ್ಲಿ ನಾಲ್ಕು ದಿನ ವಿವಿಧ ವಿಶೇಷ ಗೋಷ್ಠಿಗಳು, ಅನಂತರ ಶರಣ ಸಂಸ್ಕೃತಿ ಮಹೋತ್ಸವ (ಶ್ರೀಮಠದ ಜಾತ್ರೆ), ಧರ್ಮಗುರು ಬಸವಣ್ಣನವರ ಭಾವ ಚಿತ್ರ, ಧರ್ಮಗ್ರಂಥ ವಚನಸಾಹಿತ್ಯದ ಭವ್ಯ ಮೆರವಣಿಗೆ ಜರುಗಿಸುತ್ತಿದ್ದಾರೆ. ಆರೋಗ್ಯ ಗೋಷ್ಠಿ, ಕೃಷಿ ಗೋಷ್ಠಿ, ಶಿಕ್ಷಣ ಗೋಷ್ಠಿ, ಮಹಿಳಾ ಗೋಷ್ಠಿ, ಸಮಾಜ ಗೋಷ್ಠಿ, ಧರ್ಮ ಗೋಷ್ಠಿ, ರಾಜಕೀಯ ಚಿಂತನ ಗೋಷ್ಠಿ, ಸಹಜ ಶಿವಯೋಗ ಹಮ್ಮಿಕೊಂಡು ಗ್ರಾಮೀಣ ಜನರಿಗೆ ಉಪಯುಕ್ತ ಮಾಹಿತಿ ಜ್ಞಾನ ನೀಡುತ್ತಿದ್ದಾರೆ. ಆದರ್ಶ ವೈದ್ಯರಿಗೆ, ರೈತ ದಂಪತಿ ಗಳಿಗೆ, ಶರಣ ದಂಪತಿಗಳಿಗೆ, ಶಿಕ್ಷಕ ದಂಪತಿಗಳಿಗೆ, ವಿಧವಾ ತಾಯಂದಿರಿಗೆ, ಸೈನಿಕರಿಗೆ ಗೌರವ ಸನ್ಮಾನ ಮಾಡುತ್ತಿದ್ದಾರೆ.

ಬಸವತತ್ವ ಪ್ರಕಾರ ಗುರುಪ್ರವೇಶ (ನೂತನ ಮನೆ ಪ್ರವೇಶ), ಕಲ್ಯಾಣ ಮಹೋತ್ಸವ, ಪುಷ್ಪವೃಷ್ಟಿ, ವಚನ ಮಂತ್ರಗಳ ಮೂಲಕ ನೆರವೇರಿಸುತ್ತಿದ್ದಾರೆ. ಶ್ರೀಮಠದಲ್ಲಿ ಪ್ರತಿ ತಿಂಗಳು ೧ ನೇ ತಾರೀಖು ಮಾಸಿಕ ಶಿವಾನುಭವ ಗೋಷ್ಠಿಗಳನ್ನು ಏರ್ಪಡಿಸಿ ಅನುಭಾವಿಗಳನ್ನು ಕರೆಸಿ ಪ್ರವಚನ ಮಾಡಿಸುತ್ತಾರೆ. ಶರಣ ಸತ್ಯಪ್ಪ ಕಡೋಲಿ ಇವರ ಹೆಸರಿನಲ್ಲಿ ಪ್ರಸಿದ್ಧ ಸಂಗೀತ ಕಲಾವಿದರಿಗೆ **'ಸತ್ಯಪ್ಪ ಶರಣ ಸಂಗೀತ ಪ್ರಶಸ್ತಿ'** ನೀಡಿ ಗೌರವಿಸುತ್ತಾರೆ. ಶ್ರೀ ಬಳವಂತರಾಯ ಭಾವು ಪತ್ತಾರ ಹಾಗೂ ಮಾತೋಶ್ರೀ ತುಳಸಾಬಾಯಿ ಭಾವು ಪತ್ತಾರ ಇವರ ಸ್ಮರಣಾರ್ಥ ಸವದಿ ಗ್ರಾಮದ ಎಸ್.ಎಸ್.ಎಲ್.ಸಿ. ಹಾಗೂ ಪಿ.ಯು.ಸಿ. ಪರೀಕ್ಷೆಗಳಲ್ಲಿ ಪ್ರಥಮ ಬರುವ ವಿದ್ಯಾರ್ಥಿ ಹಾಗೂ ವಿದ್ಯಾರ್ಥಿನಿಗೆ ನಗದು ಬಹುಮಾನದೊಂದಿಗೆ ಗೌರವಿಸುತ್ತಾರೆ. **'ಶ್ರೀ ಸಂಗನಬಸವ ಧರ್ಮ ಪ್ರಸಾರಕ ಮಂಡಲ'** ಎಂಬ ಪ್ರಕಾಶನ ಸಂಸ್ಥೆ ಹುಟ್ಟು ಹಾಕಿ ಶರಣ ಸಾಹಿತ್ಯ ಗ್ರಂಥಗಳ ಪ್ರಕಟನೆ ಪ್ರಾರಂಭಿಸಿದ್ದಾರೆ.

**೪೭. ಶ್ರೀ ಶಂಕರ ಬಿದರಿ ಡಿಜಿಪಿ. ಅವರಿಗೆ ಗೌರವ ಸತ್ಕಾರ :**

ಸವದಿಯ ಶ್ರೀ ಸಂಗನಬಸವ ಮಠದಲ್ಲಿ ಲಿಂ. ಶ್ರೀ ಸಂಗನಬಸವ ಶಿವಯೋಗಿಗಳವರ ೬೬ನೇ ಸ್ಮರಣೋತ್ಸವದ ಶರಣ ಸಂಸ್ಕೃತಿ ಮಹೋತ್ಸವವನ್ನು ದಿನಾಂಕ ೧೩-೧೨-೨೦೦೭ ರಿಂದ ೧೬-೦೧-೨೦೦೮ ವರೆಗೆ ವೈಭವಪೂರ್ಣವಾಗಿ

ಆಚರಿಸಲಾಯತು. ಕೊನೆಯ ದಿನ ವಿಶ್ವ ಬಸವಧರ್ಮ ಸಮಾವೇಶವನ್ನು ಗದಗಿನ ಪೂಜ್ಯಶ್ರೀ ಜಗದ್ಗುರುಗಳವರ ಸನ್ನಿಧಾನದಲ್ಲಿ ಏರ್ಪಡಿಸಲಾಗಿತ್ತು. ಅಂದು ಪೂಜ್ಯಶ್ರೀ ಮಹಾಂತಪ್ಪಗಳವರು ನಮ್ಮ ರಾಜ್ಯದ ಪೋಲೀಸ್ ಹೆಚ್ಚುವರಿ ಮಹಾನಿರ್ದೇಶಕರಾದ (ಡಿಜಿಪಿ) ಶ್ರೀ ಶಂಕರ ಮಹಾದೇವ ಬಿದರಿ, ಅವರನ್ನು ಸವದಿ ಮಠದ ಸದ್ಭಕ್ತರ ಸದಿಚ್ಛೆಯಂತೆ ಗೌರವಪೂರ್ವಕವಾಗಿ ಸತ್ಕರಿಸಿ, ಬಸವಗುರು ಕರುಣೆಯಿಂದ ಇನ್ನೂ ಉನ್ನತ ಹುದ್ದೆಯನ್ನು ಅಲಂಕರಿಸಿ ನಾಡಿನ ಸೇವೆಗೈದು ಜನ್ಮಭೂಮಿಗೆ ಗೌರವ ತರುವಂತಾಗಲಿ ಎಂದು ಶುಭ ಹಾರೈಸಿದರು.

ಇದೇ ಸಂದರ್ಭಧಲ್ಲಿ ಶ್ರೀ ಶಂಕರ ಬಿದರಿ ಅವರೊಂದಿಗೆ ಆಗಮಿಸಿದ್ದ ಶ್ರೀ ಹೇಮಂತ ನಿಂಬಾಳಕರ ಎಸ್.ಪಿ. ಬೆಳಗಾವಿ, ಶ್ರೀ ರಮಣಗುಪ್ತಾ ಎಸ್.ಪಿ. ಅವರನ್ನು ಹಾಗೂ ಕರ್ನಾಟಕ ರಾಜ್ಯ ಲೋಕಸೇವಾ ಆಯೋಗದಿಂದ ಡಿವೈಎಸ್‌ಪಿ ಹುದ್ದೆಗೆ ಮೊದಲ ರ್‍ಯಾಂಕಿನಲ್ಲಿ ಆಯ್ಕೆಗೊಂಡಿದ್ದ ಶ್ರೀ ಚೆನ್ನಬಸವಣ್ಣ ಲಂಗೋಟಿ ಇವರನ್ನು ಪೂಜ್ಯರು ಸನ್ಮಾನಿಸಿ ಆಶೀರ್ವದಿಸಿದರು.

**೪೮. ಡಾ. ಮಹಾಂತ ಶಿವಯೋಗಿಗಳವರ ವಜ್ರಮಹೋತ್ಸವ :**

ಪರಮಪೂಜ್ಯ ಶ್ರೀ ಡಾ॥ ಮಹಾಂತ ಶಿವಯೋಗಿಗಳವರ ೮೦ನೇ ವಯಸ್ಸಿನಲ್ಲಿ ಸವದಿ ಮಠದ ಪೂಜ್ಯರು ದಿನಾಂಕ ೦೩-೧೨-೨೦೦೮ ರಿಂದ ೦೮-೦೧-೨೦೦೯ರ ವರೆಗೆ ಜರುಗಿದ ಲಿಂ. ಸಂಗನಬಸವ ಶಿವಯೋಗಿಗಳವರ ೬೭ನೇ ಪುಣ್ಯ ಸ್ಮರಣೋತ್ಸವ, ಶರಣ ಸಂಸ್ಕೃತಿ ಮಹೋತ್ಸವ ಸಂದರ್ಭದಲ್ಲಿ ದಿನಾಂಕ ೦೮-೦೧-೨೦೦೯ ರಂದು ಪೂಜ್ಯರ ವಜ್ರಹೋತ್ಸವವನ್ನು ಸವದಿಯ ಸದ್ಭಕ್ತರು ವೈಭವದಿಂದ ಆಚರಿಸಿದರು.

ಈ ವಜ್ರಮಹೋತ್ಸವ ಸಮಾರಂಭದ ದಿವ್ಯ ಸಾನಿಧ್ಯವನ್ನು ಗದಗ, ಚಿತ್ರದುರ್ಗ, ಹುಬ್ಬಳ್ಳಿ, ನಿಡಸೋಸಿ ಜಗದ್ಗುರುಗಳು, ಅಧ್ಯಕ್ಷತೆಯನ್ನು ಬೆಳಗಾವಿ-ನಾಗನೂರ ಶ್ರೀಗಳು, ಸಮ್ಮುಖವನ್ನು ಪೂಜ್ಯಶ್ರೀ ಮ.ನಿ.ಪ್ರ. ಗುರುಮಹಾಂತ ಸ್ವಾಮಿಗಳು ಸವದಿ-ಚಿತ್ತರಗಿ-ಇಳಕಲ್ಲ ಅವರು ವಹಿಸಿದ್ದರು. ತಿಕೋಟಾ ವಿರಕ್ತಮಠದ ಪೂಜ್ಯ ಶ್ರೀ ಮ.ನಿ.ಪ್ರ. ಚೆನ್ನಮಲ್ಲಿಕಾರ್ಜುನ ಸ್ವಾಮಿಗಳವರು ಒಂದು ತಿಂಗಳ ಕಾಲ 'ಬಸವ ಧರ್ಮ' ಕುರಿತು ಪ್ರವಚನ ಮಾಡಿದರು.

ಇದೇ ಸಂದರ್ಭದಲ್ಲಿ ಲಿಂ. ಶ್ರೀ ಮಹಾದೇವಪ್ಪ ಭೀಮಪ್ಪ ರಾಜಮನಿಯವರ ಸ್ಮರಣಾರ್ಥ ಶ್ರೀ ಭೀಮಪ್ಪ ಮಹಾದೇವಪ್ಪ ರಾಜಮನಿ ಇವರು ಕಟ್ಟಿಸಿದ **'ಸಂಗನ ಬಸವ ಪ್ರಸಾದ ನಿಲಯ'**ವನ್ನು ಗದಗ ಜಗದ್ಗುರು ಡಾ. ತೋಂಟದ ಸಿದ್ಧಲಿಂಗ

ಮಹಾಸ್ವಾಮಿಗಳವರ ಲಿಂಗಹಸ್ತದಿಂದ ಉದ್ಘಾಟನೆ ನೆರವೇರಿಸಲಾಯಿತು. ವಜ್ರಮಹೋತ್ಸವದಲ್ಲಿ ಅಥಣಿ, ನಾಗಣಸೂರ, ಕೆಳದಿ, ಮರೆಗುದ್ದಿ, ಸಿದ್ಧಯ್ಯನಕೋಟೆ, ಸತ್ತಿ, ರಬಕವಿ, ರಾಯಭಾಗ, ಗುಳೇದಗುಡ್ಡ, ಮಲ್ಲಾಪುರ, ಉಗಾರ, ವಿಜಯಪುರ, ಕನೇರಿ, ರಾಜನಹಳ್ಳಿ, ಶಿರಹಟ್ಟಿ, ಶಿರೂರ, ಜಮಖಂಡಿ, ಮುಧೋಳ, ಪಾಂಡೋಮಟ್ಟಿ, ಬಾಗಲಕೋಟೆ, ಲಿಂಗಸ್ಗೂರು-ಛಾವಣಿ, ಮುಂತಾದ ಮಠಾಧೀಶರು, ಗುರು-ವಿರಕ್ತ ಸ್ವಾಮಿಗಳು ಪಾಲ್ಗೊಂಡು ಅನುಭಾವ ನೀಡಿದರು.

ಶರಣರಾದ ಅಕ್ಕ ಅನ್ನಪೂರ್ಣ ಬೀದರ, ಅಕ್ಕ ಡಾ॥ ಗಂಗಾಂಬಿಕಾ ಪಾಟೀಲ ಬೀದರ, ಶ್ರೀ ಶರಣಬಸಪ್ಪ ಕೋಟೆಪ್ಪಗೋಳ ಅಥಣಿ, ಪ್ರೊ. ಸಂಜಯ ಮಾಕಲ ಗುಲಬರ್ಗಾ, ಶ್ರೀ ಅಶೋಕ ಬರಗುಂಡಿ ಗದಗ, ಶ್ರೀ ರವಿ ಯಡಹಳ್ಳಿ ಜಮಖಂಡಿ, ಡಾ. ಶಂಭು ಬಳಿಗಾರ ಇಳಕಲ್ಲ, ಪ್ರೊ. ಸಿದ್ಧಣ್ಣ ಲಂಗೋಟಿ ರಾಮದುರ್ಗ, ಶ್ರೀ ಸದಾಶಿವ ದೇವರಮನಿ ಬೆಳಗಾವಿ, ಶ್ರೀ ಶಂಕರ ಗುಡಸ ಬೆಳಗಾವಿ ಮುಂತಾದವರು ಅತಿಥಿಗಳಾಗಿ ಅನುಭಾವ ನೀಡಿದರು.

ವಜ್ರಮಹೋತ್ಸವ ಸಮಾರಂಭದಲ್ಲಿ ಸವದಿಯ ಶರಣ ಶ್ರೀ ಸಂಗನಗೌಡ ಗು. ಪಾಟೀಲ ಇವರು ಬರೆದು 'ಮಹಾಂತಪ್ರಭೆ' ಆಧುನಿಕ ವಚನಗಳ ಗ್ರಂಥ ಹಾಗೂ ಶರಣೆ ಅರ್ಚನಾ ಸಂಗಣ್ಣ ಗೂಗವಾಡ ಸಂಪಾದಿಸಿದ 'ಬಸವಣ್ಣನವರ ವಚನಗಳು', ಮತ್ತು ಶ್ರೀ ಮಲ್ಲಿಕಾರ್ಜುನ ದೇವರು ಸತ್ತಿ ಅವರು ಬರೆದ 'ವಿಶ್ವಕ್ಕೆ ಶರಣ ಸಂದೇಶ' ಎಂಬ ಗ್ರಂಥಗಳನ್ನು ಪೂಜ್ಯರು ಲೋಕಾರ್ಪಣೆ ಮಾಡಿದರು. ಶ್ರೀ ದುಂಡಯ್ಯ ಚೆನ್ನಮಲ್ಲಯ್ಯ ಮಠಪತಿ ಭಾರತೀಯ ಜೀವವಿಮಾ ನಿಗಮದ ಪ್ರತಿನಿಧಿ ಇವರು ಪ್ರಕಟಿಸಿದ ಚಿತ್ತರಗಿ-ಇಳಕಲ್ಲ-ಸವದಿಯ ಪೂಜ್ಯ ಶ್ರೀ ಡಾ. ಮಹಾಂತ ಶಿವಯೋಗಿಗಳ ಭಾವಚಿತ್ರವಿರುವ ೨೦೦೮ ರ ಹೊಸ ವರ್ಷದ ಕ್ಯಾಲೆಂಡರ ಸಹ ಬಿಡುಗಡೆಯಾಯಿತು.

ಧರ್ಮಗುರು ಬಸವಣ್ಣನವರ, ಸಂಗನಬಸವ ಶಿವಯೋಗಿಗಳ ಭಾವಚಿತ್ರ-ಗಳೊಂದಿಗೆ ಧರ್ಮಗ್ರಂಥ ವಚನಸಾಹಿತ್ಯ ಉತ್ಸವವು ವೈಭವಪೂರ್ಣವಾಗಿ ಜರುಗಿತು. ಹತ್ತಾರು ಸಾವಿರ ಜನರಿಗೆ ಪ್ರಸಾದ-ದಾಸೋಹ ವ್ಯವಸ್ಥೆ ಮಾಡಲಾಗಿತ್ತು.

**೪೯. ಡಾ. ಮಹಾಂತಪ್ಪಗಳವರ ಸವದಿ ಪಟ್ಟಾಧಿಕಾರ ಸುವರ್ಣ ಮಹೋತ್ಸವ :**

ಸವದಿಯ ಶ್ರೀ ಸಂಗನಬಸವ ವಿರಕ್ತಮಠಕ್ಕೆ ೫ನೇ ಅಧಿಪತಿಗಳಾದ ಪೂಜ್ಯ ಶ್ರೀ ಮ.ನಿ.ಪ್ರ. ಮಹಾಂತ ಶಿವಯೋಗಿಗಳು ೧೩-೧೨-೧೯೬೧ ರಂದು ಪಟ್ಟಾಭಿಷೇಕ

ಜರುಗಿ ಮಠಾಧಿಪತಿಗಳಾಗಿದ್ದರು. ಇದೇ ಡಿಸೆಂಬರ ೨೦೧೧ ಕ್ಕೆ ಐವತ್ತು ವರ್ಷವಾಗುತ್ತಿರುವುದರಿಂದ ಪೂಜ್ಯ ಶ್ರೀ ಲಿಂ. ಸಂಗನಬಸವ ಶಿವಯೋಗಿಗಳ ೭೦ನೇ ಪುಣ್ಯಸ್ಮರಣೋತ್ಸವ ಹಾಗೂ ಶರಣ ಸಂಸ್ಕೃತಿ ಮಹೋತ್ಸವ ಸಂದರ್ಭದಲ್ಲಿ ಹಿರಿಯ ಗುರುಗಳ ಪಟ್ಟಾಧಿಕಾರದ ಸುವರ್ಣ ಮಹೋತ್ಸವವನ್ನು ಇದೇದಿನಾಂಕ ೩೦-೧೧-೨೦೧೧ ರಿಂದ ೩೦-೧೨-೨೦೧೧ ವರೆಗೆ ಒಂದು ತಿಂಗಳ ಪರ್ಯಂತ ಬಸವಧರ್ಮ ಪ್ರವಚನ ಏರ್ಪಡಿಸಲಾಗಿತ್ತು. ನಮ್ಮ ನಾಡಿ ಖ್ಯಾತ ನಗೆಹಬ್ಬದ ಹಾಸ್ಯ ಸಾಹಿತಿ, ಪ್ರವಚನ ಕಾರ್ತಿಯಾಗಿರುವ ಶರಣೆ ಇಂದುಮತಿ ಸಾಲಿಮಠ ಸಾ॥ ವಿಜಯಪುರ ಅವರಿಂದ **'ಬಸವಧರ್ಮ ದರ್ಶನ'** ಪ್ರವಚನ ಏರ್ಪಡಿಸಲಾಗಿತ್ತು. ಗದಗ-ಚಿತ್ರದುರ್ಗ - ಹುಬ್ಬಳ್ಳಿ- ನಿಡಸೋಸಿ ಮುಂತಾದ ಪೂಜ್ಯ ಜಗದ್ಗುರುಗಳ ದಿವ್ಯ ಸಾನಿಧ್ಯದಲ್ಲಿ ಧಾರವಾಡ, ಅಥಣಿ, ಜಮಖಂಡಿ, ಬೈಲೂರ, ಲಿಂಗಸಗೂರು, ಸಿದ್ಧಯ್ಯನಕೋಟೆ, ರಬಕವಿ, ಮರೆಗುದ್ದಿ, ಉಪ್ಪಲದಡ್ಡಿ, ಗುಳೇದಗುಡ್ಡ, ಸಿಂಧನೂರ, ಕವಲೆದುರ್ಗ, ನಾಗಣಸೂರ, ಬಾಗಲಕೋಟೆ, ಕೂಡಲಸಂಗಮ, ಸತ್ತಿ, ಶಿರೂರ, ವಿಜಯಪುರ, ಭಾಲ್ಕಿ, ಉಗಾರ, ಸೊಲ್ಲಾಪೂರ, ಹುಲಸೂರು, ಬೀದರ ಮುಂತಾದ ಪೂಜ್ಯರು ದಯಮಾಡಿಸಿ ಅನುಭಾವ ನೀಡಿದರು.

ನಮ್ಮ ರಾಜ್ಯದ ಪೋಲೀಸ ಮಹಾನಿರ್ದೇಶಕ ಅಧಿಕಾರಿ (ಡಿ.ಜಿ.ಪಿ.) ಗಳಾದ **ಶ್ರೀ ಶಂಕರ ಬಿದರಿ** ಬೆಂಗಳೂರು ಅವರನ್ನು ಪೂಜ್ಯರು ಗೌರವಿಸಿ ಸತ್ಕರಿಸಲಾಯಿತು. ದೇಶ ರಕ್ಷಣೆ ಮಾಡಿ ನಿವೃತ್ತರಾಗಿರುವ ಸೈನ್ಯಾಧಿಕಾರಿಗಳನ್ನು- ಸೈನಿಕರನ್ನು ಸತ್ಕರಿಸಲಾಯಿತು. ಕಮಾಂಡರ ವಿನೋದ ಅಹುಜಾ, ಮೇಜರ್ ಬಿ. ಎನ್. ಮಳಗಿ ಅತಿಥಿಗಳಾಗಿ ಆಗಮಿಸಲಿದ್ದಾರೆ. ಕೆ.ಎಲ್.ಇ. ಸಂಸ್ಥೆಯ ಹೃದಯ ತಜ್ಞರಾದ ಡಾ ದೀಕ್ಷಿತ, ಡಾ॥ ಸಂಜಯ ಪೋರವಾಲ ಹಾಗೂ ಶ್ವಾಸಕೋಶ ತಜ್ಞರಾದ ಡಾ॥ ವಿನಯ ಮೈಸಾಳೆ ಬೆಳಗಾವಿ ಹಾಗೂ ಶ್ರೀ ಎ. ಎಂ. ಖೊಬ್ರಿ ವಕೀಲರು, ಶ್ರೀ ಅಮರೇಗೌಡ ಮಟ್ಟೂರ, ಮುದಗಲ್ಲ, ಶ್ರೀ ಶಂಕರ ಗುಡಸ ಬೆಳಗಾವಿ, ಡಿ.ವೈ.ಎಸ್.ಪಿ. ಚೆನ್ನಬಸವಣ್ಣ ಲಂಗೋಟಿ ಮಂಡ್ಯ, ಶ್ರೀ ಮಹಾಂತೇಶ ಪಾಟೀಲ ಪಿ.ಎಸ್.ಆಯ್. ಗುಲಬರ್ಗಾ ಗೌರವಿಸಿದರು.

ಶರಣ ಸಾಹಿತಿಗಳೂ ಅನುಭಾವಿಗಳೂ ಆದ ಪ್ರೊ. ಸಿದ್ಧಣ್ಣ ಲಂಗೋಟಿ, ಶ್ರೀ ಅಶೋಕ ಬರಗುಂಡಿ, ಡಾ. ಅಶೋಕ ಆಲೂರ, ಡಾ. ಮೀನಾಕ್ಷಿ ಬಾಳಿ ಗುಲಬರ್ಗಾ, ಡಾ. ವ್ಹಿ. ಎಸ್. ಮಾಳಿ ಹಾರೂಗೇರಿ, ಶ್ರೀ ಈಶ್ವರ ಮಂಟೂರ ಹೂನ್ನೂರ, ಶ್ರೀ ಸಿ. ಎಸ್. ನಾರನಾಳ ಗಂಗಾವತಿ, ಶ್ರೀ ಎಂ. ಎಸ್. ಸಿಂಧೂರ ಇವರುಗಳಿಂದ ಅನುಭಾವ, ರೈತ ಮುಖಂಡರಾದ ಶ್ರೀ ಬಾಬಾಗೌಡ ಪಾಟೀಲ, ಕರ್ನಾಟಕ ಸರಕಾರದ ಸಹಕಾರ

ಹಾಗೂ ಕೃಷಿ ಮಾರುಕಟ್ಟೆ ಸಚಿವರಾದ ಶ್ರೀ ಲಕ್ಷ್ಮಣ ಸಂಗಪ್ಪ ಸವದಿ, ಶ್ರೀ ಬಿ. ಎಲ್. ಪಾಟೀಲ ಕಾರ್ಯಾಧ್ಯಕ್ಷರು ವಿಮೋಚನಾ ಸಂಸ್ಥೆ ಅಥಣಿ, ಶ್ರೀ ಸಿದ್ದು ಸವದಿ ಶಾಸಕರು, ತೇರದಾಳ ಶ್ರೀ ತಾತಾಸಾಹೇಬ ಬಾಂಗಿ ವಕೀಲು ಜಮಖಂಡಿ, ಇಳಕಲ್ಲದವರಾದ ಶ್ರೀ ಜಿ. ಪಿ. ಪಾಟೀಲ, ಶ್ರೀ ಎಂ. ವ್ಹಿ. ಪಾಟೀಲ, ಶ್ರೀ ಕೇಶವ ಕಂದಿಗೊಂಡ, ಶ್ರೀ ಅಶೋಕ ಬಿಜ್ಜಲ, ಶ್ರೀ ಗುರಣ್ಣ ಮರಟದ, ಡಾ. ಕೆ. ಬಿ. ಅಕ್ಕಿ, ಶ್ರೀ ಎಂ. ಎಸ್. ಪಾಟೀಲ, ಶ್ರೀ ನಾಗಪ್ಪ ಕನ್ನೂರ, ಶ್ರೀ ಶರಣಪ್ಪ ಅಕ್ಕಿ ಶ್ರೀ ಚಂದ್ರಶೇಖರ ಜಾಪಗಾಲ, ಶ್ರೀ ಶಿವರುದ್ರಪ್ಪ ಗೊಂಗಡಶೆಟ್ಟಿ, ಶ್ರೀ ರೇಣುಕಯ್ಯ ಶಾಸ್ತ್ರಿಮಠ, ಡಾ॥ ಮಹಾಂತೇಶ ಕಡಪಟ್ಟಿ ಮುಂತಾದವರು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು.

ಇದೇ ಸಂದರ್ಭದಲ್ಲಿ ದಿನಾಂಕ ೩೦-೧೨-೨೦೧೧ ರಂದು ಶರಣ ಸಾಹಿತಿಗಳಾದ ಪ್ರೊ. ಸಿದ್ಧಣ್ಣ ಲಂಗೋಟಿ ಗೌ॥ ಸಂಪಾದಕರು, ಬಸವ ಬೆಳಗು ಪತ್ರಿಕೆ ಇವರು ಬರೆದ 'ಬಸವಜ್ಯೋತಿ ಮಹಾಂತ ಶಿವಯೋಗಿಗಳು' ಎಂಬ ಕೃತಿಯು ಬಿಡುಗಡೆಯಾಯಿತು.

**೫೦. ಸವದಿಯ ಶ್ರೀ ಮಠದ ಸದ್ಭಕ್ತರ ಸೇವೆ ಸಾರ್ಥಕ :**

'ಸ್ವಾಮಿ ಇದ್ದರೆ ಇರಬೇಕು ಸವದಿ ಮಹಾಂತಪ್ಪನಂಥವರು, ಭಕ್ತರಿದ್ದರೆ ಇರಬೇಕು ಸವದಿ ಸದ್ಭಕ್ತರಂಥವರು' ಎಂಬ ನಾಣ್ಣುಡಿಯು ಹೊಸದಾಗಿ ಭಜನಾಪದಗಳಲ್ಲಿ ಗ್ರಾಮೀಣಜನರು ಹಾಡುವಂತಾಗಿದೆ. ಸವದಿಸಂಗನಬಸವಮಠ ಹಾಗೂ ಚಿತ್ತರಗಿ-ಇಳಕಲ್ಲ ಸಂಸ್ಥಾನಮಠ ಎರಡೂ ಪೂಜ್ಯ ಮಹಾಂತಪ್ಪಗಳವರ ಸಾಧನೆ, ಬಸವತತ್ವದ ಅನುಷ್ಠಾನದಿಂದಾಗಿ ದೇಶ-ವಿದೇಶಗಳಲ್ಲೆಲ್ಲಾ ಪ್ರಸಿದ್ಧಿಯಾಗಿವೆ. 'ಘಟದಿಂದ ಮಠಗಳು ಬೆಳಗುತ್ತವೆ' ಎಂಬ ಅನುಭವದ ಮಾತಿಗೆ ಪೂಜ್ಯರ ಜೀವನ ಸಾಧನೆಯೇ ಸಾಕ್ಷಿಯಾಗಿದೆ.

ಇಂತಹ ಪೂಜ್ಯರನ್ನು ಪಡೆದಿರುವ ಸವದಿಯ ಸದ್ಭಕ್ತರ ಸೇವೆಯು ಸಾರ್ಥಕವಾಗಿದೆ. ಇಂದಿಗೂ ಜಾತಿ-ಮತ-ಪಂಥಗಳೆಂಬ ಭೇದಭಾವವಿಲ್ಲದೇ ಎಲ್ಲರೂ ಪೂಜ್ಯರ ಕಾರ್ಯದಲ್ಲಿ ತನು-ಮನ-ಧನದಿಂದ ದುಡಿಯುತ್ತಿದ್ದಾರೆ. ಅವರಲ್ಲಿ ಕೆಲವರ ಹೆಸರುಗಳನ್ನು ಇಲ್ಲಿ ಉಲ್ಲೇಖಿಸಲು ಹೆಮ್ಮೆ ಎನಿಸುತ್ತದೆ- ''ಶರಣ ಜೀವಿಗಳಾದ ಶ್ರೀ ಶಿವಗೌಡ ಶಿದಗೌಡ ಪಾಟೀಲ, ಶ್ರೀ ಬಾಬಾಸಾಹೇಬ ಬಸಗೌಡ ಪಾಟೀಲ, ಶ್ರೀ ಬಾಳಪ್ಪ ಚನಮಲ್ಲಪ್ಪ ಬಾಳಿಕಾಯಿ, ಶ್ರೀ ಬಸಪ್ಪ ಶಿವಪ್ಪ ಅವಟಿ, ಶ್ರೀ ಬಾಕಪ್ಪ ಬಸಗೌಡ ಮಾಯಪ್ಪನವರ, ಶ್ರೀ ರಾವಸಾಹೇಬ ಬಸಗೌಡ ಪಾಟೀಲ, ಶ್ರೀ ಶಿವಗೌಡ

ಬಾಳಗೌಡ ಮಗದುಮ್, ಶ್ರೀ ಅಪ್ಪಾಲಾಲ ಅಲ್ಲಾಭಕ್ಷ ಪಾರ್ಥನಳ್ಳಿ, ಶ್ರೀ ಭೀಮಪ್ಪ ಮಾದಪ್ಪ ರಾಜಮನಿ, ಶ್ರೀ ಅಪ್ಪಣ್ಣ ಶಿವಮಲ್ಲ ರೆಡ್ಡಿ, ಶ್ರೀ ಕಲ್ಲಪ್ಪ ಗಂಗಪ್ಪದುಲಾರಿ, ಶ್ರೀ ಗುಂಡು ಪರಪ್ಪ ಸೊಂಡಿ, ಶ್ರೀ ಬಸಲಿಂಗಪ್ಪ ತಮ್ಮಣ್ಣಪ್ಪ ಖೋತ (ರಡ್ಡೇರಟ್ಟಿ), ಶ್ರೀ ಸತ್ತೆಪ್ಪ ಬಾಡಗಿ (ಜನವಾಡ), ಶ್ರೀ ಶಂಕರೆಪ್ಪ ಕಿತ್ತೂರ (ಹಿಪ್ಪರಗಿ), ಶ್ರೀ ಕೆಂಚಪ್ಪ ನಂದೆಪ್ಪ ಪಾಟೀಲ (ನಂದೇಶ್ವರ), ಶ್ರೀ ಸಂನಗೌಡ ಗುರುಪಾದಗೌಡ ಪಾಟೀಲ, ಶ್ರೀ ಶಿಖಂದರ ಅಮೀನಸಾ ಗದ್ಯಾಳ, ಶ್ರೀ ಗುರುಲಿಂಗ ಚನ್ನಪ್ಪ ಗಾಳಿ, ಶ್ರೀ ವೆಂಕಟೇಶ ಹಣಮಂತ ದೇಶಪಾಂಡೆ, ಶ್ರೀ ಮಹಾವೀರ ಹಣಮಂತ ಮಾದರ, ಶ್ರೀ ಚಂದ್ರಪ್ಪ ಬಾಳಪ್ಪ ಮಾದರ, ಶ್ರೀ ಟೋಪಣ್ಣ ರಾಮಣ್ಣ ಜಿನೋಜಿ, ಶ್ರೀ ಸಿದ್ಧಪ್ಪ ಧರೆಪ್ಪ ಸೂರಗೋಣ, ಶ್ರೀ ಬಸಪ್ಪ ರಾಮಪ್ಪ ರಡ್ಡಿ, ಶ್ರೀ ಗೌಡಪ್ಪ ರಾಮಗೌಡ ಪಾಟೀಲ, ಶ್ರೀ ರಾಯಪ್ಪ ಜೀವೋಜಿ, ಶ್ರೀರಾಜಶೇಖರ ವೆಂಕನಗೌಡ ಪಾಟೀಲ, ಶ್ರೀ ಪರಸಪ್ಪ ಸಿದ್ದಪ್ಪ ಬಾಗೆನ್ನವರ, ಶ್ರೀ ಕರೆಪ್ಪ ಕಲ್ಲಪ್ಪ ಅಗಸರ, ಶ್ರೀ ಶಿವಪುತ್ರ ಶಂಕರ ಧವಳೇಶ್ವರ, ಶ್ರೀ ಸಾಹೇಬಲಾಲ ನಬಿಸಾಬ ಕರೋಸಿ, ಶ್ರೀ ಬಳವಂತರಾವ ಬಾಹು ಪತ್ತಾರ ಶ್ರೀ ಜಿನ್ನಪ್ಪ ರಾಯಪ್ಪ ಸೂರಗೊಂಡ, ಶ್ರೀ ಮಲ್ಲಪ್ಪ ಸಿದ್ದಪ್ಪ ಅವಟಿ, ಶ್ರೀ ಮಲ್ಲನಗೌಡ ವೆಂಕನಗೌಡ ಪಾಟೀಲ, ಶ್ರೀ ಬಸವರಾಜ ಬಾಬಾಸಾಹೇಬ ಪಾಟೀಲ, ಶ್ರೀ ಶಿವಕುಮಾರ ರಾವಸಾಹೇಬ ಪಾಟೀಲ, ಶ್ರೀ ಜಯಾನಂದ ನರಸಗೌಡ ಪಾಟೀಲ, ಶ್ರೀ ಶ್ರೀಶೈಲ ಕಲ್ಲಪ್ಪ ದುಲಾರೆ, ಶ್ರೀ ನೇಮಿನಾಥ ವೆಂಕಣ್ಣ ಸಮಗೊಂಡ, ಶ್ರೀ ಪ್ರಕಾಶ ಮುರಿಗೆಪ್ಪ ಪಾಟೀಲ, ಶ್ರೀ ಮುರಿಗೆಪ್ಪ ರಾಯಪ್ಪ ಕುಂಬಾರ, ಶ್ರೀ ಚಂದ್ರಶೇಖರ ಸಿದ್ದಪ್ಪ ಅವಟಿ, ಶ್ರೀ ಸಂಗಪ್ಪ ಲಕ್ಷ್ಮಣ ಜೀವೋಜಿ, ಶ್ರೀ ನರಸಪ್ಪ ನಿಂಗಪ್ಪ ಬಾಳಿಕಾಯಿ, ಶ್ರೀ ತಮ್ಮಣ್ಣ ರಾಮಪ್ಪ ರಬಕವಿ, ಶ್ರೀ ನರಸಗೌಡ ಸಂಗನಗೌಡ ಪಾಟೀಲ, ಶ್ರೀ ಗುರುಬಸಯ್ಯ ಮಲ್ಲಯ್ಯಾ ಸಂಕ್ರಟ್ಟಿಮಠ, ಶ್ರೀ ಶೇಖರ ಚಿನ್ನಪ್ಪ ಧವಳೇಶ್ವರ , ಶ್ರೀ ಬಸಗೌಡ ಟಿಕ್ಕಪ್ಪ ಪಾಟೀಲ, ಶ್ರೀ ಸಿದಗಿರಿ ಬಸಪ್ಪ ಕವಲಾಪುರ, ಶ್ರೀ ಗುರಪ್ಪ ಬಸಪ್ಪ ರಾಜಮನಿ, ಶ್ರೀ ಮಾದೇವ ಚನ್ನಪ್ಪ ರಾಜಮನಿ, ಶ್ರೀ ಬಸಪ್ಪ ರಾಯಪ್ಪ ಠಕ್ಕಣ್ಣವರ, ಶ್ರೀ ಮಲ್ಲಪ್ಪ ಸತ್ತೆಪ್ಪ ಅಥಣಿ, ಶ್ರೀ ಸಂಗಪ್ಪ ಸಿದ್ದಪ್ಪ ಗೂಗವಾಡ, ಶ್ರೀ ಬಸಗೌಡ ಪರಗೌಡ ಪಾಟೀಲ, ಶ್ರೀ ಶಿವದಾಸ ಧರೆಪ್ಪ ಕೊಣ್ಣೂರ, ಶ್ರೀ ನಾಗಪ್ಪ ಧರೆಪ್ಪ ಠಕ್ಕಣ್ಣವರ, ಶ್ರೀ ಶ್ರೀಶೈಲ ಬಾಳಪ್ಪ ಬಾಳೀಕಾಯಿ, ಶ್ರೀ ಮಲಗೌಡ ಧೂಳಗೌಡ ಪಾಟೀಲ, ಶ್ರೀ ವೃಷಭ ಭುಜಬಲ ಓಗಿ, ಶ್ರೀ ಮಹಾದೇವ ಸಂಗಪ್ಪ ಸಾರವಾಡ, ಶ್ರೀ ಬಸಪ್ಪ ಶಿವಪುತ್ರ ವಾಲಿ, ಶ್ರೀ ಪರಮೇಶ ಸಾರವಾಡ, ಶ್ರೀ ಧರೆಪ್ಪ ಕರೆಪ್ಪ ಕೊಣ್ಣೂರ, ಶ್ರೀ ಮಹೇಶ ಶಿವಪುತ್ರ ಧವಳೇಶ್ವರ, ಶ್ರೀ ಭೀಮಪ್ಪ ಮುರಿಗೆಪ್ಪ ಪಾಟೀಲ

ಶ್ರೀ ಸುರೇಂದ್ರ ನಿಂಗಪ್ಪ ಕಡೋಲಿ, ಶ್ರೀ ರೇವಪ್ಪ ಮುರಿಗೆಪ್ಪ ಪಾಟೀಲ, ಶ್ರೀ ಪ್ರಕಾಶ ಮುರಿಗೆಪ್ಪ ಪಾಟೀಲ, ಶ್ರೀ ಸಂಗಪ್ಪ ಗುಂಡು ಸೊಂಡಿ, ಶ್ರೀ ಮಲ್ಲಿಕಾರ್ಜುನ ತೊದಲಬಾಗಿ, ಶ್ರೀ ಧೂಳಪ್ಪ ಭರಮಪ್ಪ ಕಾಂಬಳೆ, ಶ್ರೀ ಶಂಕರ ಸಾಳುಂಕೆ, ಶ್ರೀ ಮಾರುತಿ ನಾವಿ, ಶ್ರೀ ಅಶೋಕ ಮಲ್ಲಪ್ಪ ಸಾರವಾಡ, ಶ್ರೀ ಶ್ರೀಶೈಲ ಟಕ್ಕಪ್ಪ ಮಾಯಪ್ಪನವರ, ಶ್ರೀ ಧರೆಪ್ಪ ಬಸಪ್ಪ ಟಕ್ಕನ್ನವರ, ಶ್ರೀ ಬಸಪ್ಪ ಹಣಮಂತ ಮಾಯಪ್ಪನವರ, ಶ್ರೀ ಸುರೇಶಸಂಗಪ್ಪ ನೇಮಗೌಡರ, ಶ್ರೀ ಮಲ್ಲಿಕಾರ್ಜುನ ಟಕ್ಕನ್ನವರ, ಶ್ರೀ ಧನಪಾಲಕಡೋಲಿ, ಶ್ರೀ ಶಿವಪ್ಪ ಟಕ್ಕನ್ನವರ, ಶ್ರೀ ಕಲ್ಲಪ್ಪ ದುಲಾರಿ, ಡಾ. ಶ್ರೀಶೈಲ ಕೊಪ್ಪದ, ಡಾ.ಸುರೇಶ ಮೈಗೂರ, ಡಾ. ಲಿಂಗರಾಜ ಸಿದ್ಧಣವರ ಮುಂತಾದವರು.

ಈ ಎಲ್ಲ ಶರಣ ಜೀವಿಗಳ ಹೆಸರುಗಳನ್ನು ಲಿಸ್ಟ ಮಾಡಿ ಕಳಿಸಿಕೊಟ್ಟ ಶ್ರೀ ಸಂಗನಗೌಡ ಗು. ಪಾಟೀಲ ಅವರಿಗೂ, ಶ್ರೀ ಶ್ರೀಶೈಲ ಬಾಳಪ್ಪ ಬಾಳಿಕಾಯಿ ಅವರಿಗೂ ಅನಂತ ಧನ್ಯವಾದಗಳು. ಇವರಲ್ಲದೇ ಗ್ರಾಮದ ಸಮಸ್ತ ಭಕ್ತರು, ತಾಯಂದಿರು, ಸಹೋದರಿಯರು, ಮಕ್ಕಳು ಶ್ರೀಮಠದ ಕಾರ್ಯಕ್ರಮಕ್ಕೆ ಆಗಮಿಸುವ ಶರಣರಿಗೆ, ಸದ್ಭಕ್ತರಿಗೆ, ಪೂಜ್ಯರಿಗೆ ಪ್ರಸಾದ ಮಾಡಿ ತಂದು ಎಡೆ ಮಾಡುತ್ತಾರೆ. ಸವದಿಯ ಮಠದ ಸಮಸ್ತ ಭಕ್ತರೆಲ್ಲ ಬಸವ ಸಂತಾನರಾಗಿದ್ದಾರೆ. ಇಂಥವರಿಗೆ ಜನ್ಮ ನೀಡಿದ ಸವದಿ ಗ್ರಾಮವು ಅವಿಮುಕ್ತ ಕ್ಷೇತ್ರವಾಗಿದೆ.

**೫೧. ಸವದಿಯ ಸಂಗನಬಸವ ಮಠದ ಗುರುಪರಂಪರೆ :**

(ಮಠಾಧೀಶರಾಗಿ ಸೇವೆಸಲ್ಲಿಸಿದ ಕಾಲ)

೧. ಪೂಜ್ಯ ಶ್ರೀ ಬಸವಲಿಂಗ ಸ್ವಾಮಿಗಳು (ಸವದಿ) (ಮೂಲಕ ಕರ್ತೃಗಳು) (೧೭೫೦ ರಿಂದ ೧೮೦೦)

೨. ಪೂಜ್ಯ ಶ್ರೀ ಮುರುಘೇಂದ್ರ ಸ್ವಾಮಿಗಳು (ಸವದಿ) (೧೮೦೧ ರಿಂದ ೧೮೫೦)

೩. ಪೂಜ್ಯ ಶ್ರೀ ಸೋಮನಾಥ ಸ್ವಾಮಿಗಳು (ಹಿಪ್ಪರಗಿ) (೧೮೫೧ ರಿಂದ ೧೯೯೦)

೪. ಪೂಜ್ಯ ಶ್ರೀ ಸಂಗನಬಸವ ಸ್ವಾಮಿಗಳು (ಹಿಪ್ಪರಗಿ) (೧೯೯೧ ರಿಂದ ೧೯೪೦)

**೫. ಶ್ರೀ ಮಹಾಂತ ಸ್ವಾಮಿಗಳು (ಹಿಪ್ಪರಗಿ) (೧೯೪೧ ರಿಂದ..........)**

**೬. ಶ್ರೀ ಗುರುಮಹಾಂತ ಸ್ವಾಮಿಗಳು (ನರಗುಂದ) (೨೦೦೫ ರಿಂದ.........)**

## ಪ್ರೊ. ಸಿದ್ಧಣ್ಣ ಲಂಗೋಟಿ ಅವರ ಕೃತಿಗಳು



ಶರಣ ಸಾಹಿತಿ

## ಪ್ರೊ. ಸಿದ್ಧಣ್ಣ ಲಂಗೋಟಿ

**'ಜಗಜ್ಯೋತಿ ಬಸವೇಶ್ವರ'** ವಚನಾಂಕಿತದಲ್ಲಿ ವಚನಗಳನ್ನು ರಚಿಸಿ, ಆಧುನಿಕ ವಚನಕಾರರರಲ್ಲಿ ಒಬ್ಬರಾಗಿರುವ, ಬಸವತತ್ವನಿಷ್ಠ **ಶರಣ ಪ್ರೊ. ಸಿದ್ಧಣ್ಣ ಲಂಗೋಟಿ,** ಚಾಂದಕವಠೆ ಗ್ರಾಮದ ಕೃಷಿ ಕುಟುಂಬದಲ್ಲಿ ೧೯೫೧ ರಲ್ಲಿ ಜನಿಸಿದರು.

ವಿಜ್ಞಾನ, ತತ್ವಜ್ಞಾನ, ಕಾನೂನು, ಸಾಹಿತ್ಯ ಯೋಗಗಳಲ್ಲಿ ಸ್ನಾತಕ ಶಿಕ್ಷಣ ಪಡೆದು, ಬಸವ ತತ್ವ ಪ್ರಸಾರದ ಮಹಾಮಣಿಹ ಪೂರೈಸುತ್ತಿದ್ದಾರೆ.

ಸುಜ್ಞಾನ-ಸತ್ಕ್ರಿಯೆ-ಸ್ವಾನುಭಾವದ ಶರಣ ಜೀವಿಗಳಾಗಿರುವ ಸಿದ್ಧಣ್ಣನವರು ಬಸವತತ್ವ ಪ್ರಸಾರ ಸಂಸ್ಥೆಯ ಸ್ಥಾಪಕ ಪ್ರಧಾನಕಾರ್ಯದರ್ಶಿಯಾಗಿ, ಶಿವಾನುಭವ ಪತ್ರಿಕೆಯನ್ನು ಮರಳಿ ಪ್ರಾರಂಭಿಸಿ ಸಂಪಾದಕರಾಗಿ ಮಹತ್ವದ ಪಾತ್ರವಹಿಸಿದರು. ಶರಣ ಸಿದ್ಧಾಂತ ವಿದ್ಯಾಪೀಠದ ಸಂಚಾಲಕರಾಗಿ ಕಳೆದ ೪೦ ವರುಷಗಳಿಂದ ಶಿವಾನುಭವ ಶಿಬಿರಗಳನ್ನು ಸಂಘಟಿಸುತ್ತಾ ಬಂದಿದ್ದಾರೆ. ೧೯೯೦ರಲ್ಲಿ ಇಳಕಲ್ಲ ಹಿರಿಯ ಪೂಜ್ಯರೊಂದಿಗೆ ಇಂಗ್ಲೆಂಡ ಪ್ರವಾಸ ಮಾಡಿ 'ಬಸವ ಇಂಟರ್‌ನ್ಯಾಷನಲ್ ಫೌಂಡೇಶನ್ ಲಂಡನ್' ಸ್ಥಾಪಕ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿದ್ದಾರೆ. ೨೦೦೦ ಇಸ್ವಿಯಲ್ಲಿ ಇಂಗ್ಲೆಂಡ - ಅಮೇರಿಕಾ -ಫ್ರಾನ್ಸ್ -ಕೆನಡಾ -ಜರ್ಮನ್ -ಹಾಲಂಡ-ಇಟಲಿ - ವೆಟಿಕನ್- ಸಿಂಗಾಪೂರ- ಆಸ್ಟ್ರೀಯಾ-ಅರಬ್ ಮುಂತಾದ ೧೮ ರಾಷ್ಟ್ರಗಳಿಗೆ ಹೋಗಿ ಬಸವತತ್ವ ಪ್ರಸಾರಗೈದು ಬಂದಿದ್ದಾರೆ.

ಇಳಕಲ್ಲ ಶ್ರೀಮಠದ 'ಬಸವಬೆಳಗು' ಪತ್ರಿಕೆಯ ಗೌ. ಸಂಪಾದಕರಾಗಿ ೩೦ ವರುಷಗಳಿಂದ ಸೇವೆ, ಬಸವಾದಿ ಶರಣರ ಧರ್ಮ, ಸಾಹಿತ್ಯ, ತತ್ವಜ್ಞಾನ, ಶಿಕ್ಷಣ, ಯೋಗ ಕುರಿತು ೬೮ಕ್ಕೂ ಮಿಕ್ಕಿ ಗ್ರಂಥಗಳ ರಚನೆ, ಸಂಪಾದನೆ ಮಾಡಿದ್ದಾರೆ. ಶರಣ ಸಿದ್ಧಾಂತ ವಿದ್ಯಾಪೀಠ, ಮಹಾಂತ ಜೋಳಿಗೆ ಕಾರ್ಯಕ್ರಮಗಳ ಸಂಚಾಲಕ, ಸಂಯೋಜಕರಾಗಿ ಪೂಜ್ಯ ಮಹಾಂತ ಶಿವಯೋಗಿಗಳ ಕೃಪೆಗೆ ಪಾತ್ರರಾಗಿದ್ದಾರೆ.

**- ಶ್ರೀ ಮ.ನಿ.ಪ್ರ. ಗುರುಮಹಾಂತಸ್ವಾಮಿಗಳು**
ಚಿತ್ತರಗಿ ಸಂಸ್ಥಾನಮಠ, ಇಳಕಲ್
ಸಂಗನಬಸವ ಮಠ ಸವದಿ (ಅಥಣಿ)